# ಪ್ರಥಮ ಭಾಷೆ ಕನ್ನಡ

**ಅವಧಿ: 3 ಗಂಟೆಗಳು ಮಾದರಿ ಪ್ರಶ್ನೆ- ಉತ್ತರ ಪತ್ರಿಕೆ-1 ಗರಿಷ್ಠ ಅಂಕ : 100**

**ವಿಷಯ ಸಂಕೇತ :01K**

---

**I. ಕೆಳಗಿನ ಪ್ರಶ್ನೆಗಳಿಗೆ ಅಥವಾ ಅಪೂರ್ಣ ಹೇಳಿಕೆಗಳಿಗೆ ನಾಲ್ಕು ಆಯ್ಕೆಗಳನ್ನು ಕೊಡಲಾಗಿದೆ. ಅವುಗಳಲ್ಲಿ ಹೆಚ್ಚು ಸೂಕ್ತವಾದ ಉತ್ತರವನ್ನು ಆರಿಸಿ, ಕ್ರಮಾಕ್ಷರದೊಂದಿಗೆ ಉತ್ತರವನ್ನು ಬರೆಯಿರಿ. 1x6=6**

1. ಕನ್ನಡ ವರ್ಣಮಾಲೆಯಲ್ಲಿ ಒಂದು ಮಾತ್ರಾಕಾಲದಲ್ಲಿ ಉಚ್ಚರಿಸುವ ಸ್ವರಾಕ್ಷರಗಳು ;
   (ಎ) ದೀರ್ಘಸ್ವರ (ಬಿ) ಹ್ರಸ್ವಸ್ವರ
   (ಸಿ) ಪ್ಲುತಸ್ವರ (ಡಿ) ಸುಸ್ವರ
   **ಉತ್ತರ : (ಬಿ) ಹ್ರಸ್ವಸ್ವರ**
2. ಅನ್ವರ್ಥನಾಮ ಪದಕ್ಕೆ ಉದಾಹರಣೆ ;
   (ಎ) ಮನುಷ್ಯ (ಬಿ) ವ್ಯಾಪಾರಿ
   (ಸಿ) ಸಹದೇವ (ಡಿ) ತಮಗೆ
   **ಉತ್ತರ : (ಬಿ) ವ್ಯಾಪಾರಿ**
3. ತೃತೀಯಾ ವಿಭಕ್ತಿ ಕಾರಕಾರ್ಥ ;
   (ಎ) ಕರ್ತೃ (ಬಿ) ಸಂಪ್ರಧಾನ
   (ಸಿ) ಕರ್ಮ (ಡಿ) ಕರಣ
   **ಉತ್ತರ : (ಡಿ) ಕರಣ**
4. ಕ್ರಿಯಾರ್ಥಕಾವ್ಯಯವನ್ನು ಸೂಚಿಸುವ ಪದ ;
   (ಎ) ಚೆನ್ನಾಗಿ (ಬಿ) ಸಾಕು
   (ಸಿ) ಮತ್ತು (ಡಿ) ಅಯ್ಯೋ
   **ಉತ್ತರ : (ಬಿ) ಸಾಕು**
5. ಸವರ್ಣದೀರ್ಘಸಂಧಿ ಪದ ;
   (ಎ) ದ್ರವ್ಯಾರ್ಥಿ (ಬಿ) ವಾಗ್ದೇವಿ
   (ಸಿ) ಮಳೆಗಾಲ (ಡಿ) ಬಲ್ಲೆನೆಂದು
   **ಉತ್ತರ : (ಎ) ದ್ರವ್ಯಾರ್ಥಿ**
6. 'ನೋಟ' ಎಂಬುದು ಈ ವ್ಯಾಕರಣಾಂಶವಾಗಿದೆ.
   ಎ) ಕೃದಂತನಾಮ ಬಿ) ಕೃದಂತಭಾವನಾಮ
   ಸಿ) ಕೃದಂತಾವ್ಯಯ ಡಿ) ತದ್ಧಿತಾಂತ
   **ಉತ್ತರ : (ಬಿ) ಕೃದಂತಭಾವನಾಮ**

**II. ಕೆಳಗಿನ ಪ್ರಶ್ನೆಗಳಿಗೆ ಮೊದಲೆರಡು ಪದಗಳಿಗಿರುವ ಸಂಬಂಧದಂತೆ ಮೂರನೆಯ ಪದಕ್ಕೆ ಸರಿಹೊಂದುವ ಸಂಬಂಧೀ ಪದವನ್ನು ಬರೆಯಿರಿ. 4x1=4**

7. ಸ್ವಾಮಿದ್ರೋಹ : ತತ್ಪುರುಷ ಸಮಾಸ : : ಮುಂಗೈ : **ಅಂಶಿ ಸಮಾಸ**
8. ದಾಖಲೆ : ಉರ್ದು : : ಅನಾನಸು : **ಪೋರ್ಚ್‌ಗೀಸ್**
9. ಯುದ್ಧ : ಜುದ್ಧ : : ಪ್ರಸಾದ : **ಹಸಾದ**
10. ಇಲ್ಲದ್ಹಂಗ : ಇಲ್ಲದಹಾಗೆ : : ಇಸವಾಸ : **ವಿಶ್ವಾಸ**

**III. ಕೆಳಗಿನ ಪ್ರಶ್ನೆಗಳಿಗೆ ಪ್ರತಿಯೊಂದಕ್ಕೂ ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ 1x7=7**

11. " ಕೈಗಾರಿಕೀಕರಣ ಇಲ್ಲವೆ ಅವನತಿ " ಎಂಬ ಘೋಷಣೆ ಮಾಡಿದವರು ಯಾರು ?
**ಉತ್ತರ: "ಕೈಗಾರಿಕೀಕರಣ ಇಲ್ಲವೆ ಅವನತಿ"ಎಂಬ ಘೋಷಣೆ ಮಾಡಿದವರು ಸರ್.ಎಂ.ವಿಶ್ವೇಶ್ವರಯ್ಯ.**

12. ಶಾನುಭೋಗರ ರಾಜಭಕ್ತಿಯ ಲಾಂಛನ ಯಾವುದಾಗಿತ್ತು ?
**ಉತ್ತರ: ಶಾನುಭೋಗರ ರಾಜಭಕ್ತಿಯ ಲಾಂಛನ ಖಿರ್ದಿಪುಸ್ತಕ.**

13. ಧರ್ಮಬುದ್ಧಿ ಮತ್ತು ದುಷ್ಟಬುದ್ಧಿಯರು ಎಲ್ಲಿ ಬೀಡು ಬಿಟ್ಟಿದ್ದರು ?
**ಉತ್ತರ: ಧರ್ಮಬುದ್ಧಿ ಮತ್ತು ದುಷ್ಟಬುದ್ಧಿಯರು ಮಧುರಾಪುರದ ಊರ ಹೊರಗಿ ಉದ್ಯಾನದೊಳಗೆ ಬೀಡು ಬಿಟ್ಟಿದ್ದರು.**

14. ಉಜ್ಜಯಿನಿ ಅರಸ ಯಾರು ?
**ಉತ್ತರ: ಉಜ್ಜಯಿನಿ ಅರಸ ವೃಷಭಾಂಕ.**

15. ನಿಮಗೆ ನಮಸ್ಕರಿಸಿ ಹೋಗಲು ಬಂದೆನಷ್ಟೇ ಎಂದು ದುರ್ಯೊಧನ ಯಾರಿಗೆ ಹೇಳುವನು?
**ಉತ್ತರ: ನಿಮಗೆ ನಮಸ್ಕರಿಸಿ ಹೋಗಲು ಬಂದೆನಷ್ಟೇ ಎಂದು ದುರ್ಯೊಧನ ಭೀಷ್ಮರಿಗೆ ಹೇಳುವನು.**

16. ದ್ರುಪದನು ಎಲ್ಲಿ ರಾಜ್ಯಭಾರ ಮಾಡುತ್ತಿದ್ದನು?
**ಉತ್ತರ: ದ್ರುಪದನು ಛತ್ರಾವತಿಯಲ್ಲಿ ರಾಜ್ಯಭಾರ ಮಾಡುತ್ತಿದ್ದನು**

17. ವಿವೇಕಾನಂದರು ಮೊದಲನೆ ಆದ್ಯತೆ ಯಾವುದಕ್ಕೆ ನೀಡಬೇಕೆಂದಿದ್ದಾರೆ?
**ಉತ್ತರ: ವಿವೇಕಾನಂದರು ಬಡಜನರ ಹೊಟ್ಟೆಹಸಿವನ್ನು ಹಿಂಗಿಸುವುದಕ್ಕೆ ಮೊದಲ ಆದ್ಯತೆ ನೀಡ ಬೇಕೆಂದಿದ್ದಾರೆ.**

**IV.ಈ ಕೆಳಗಿನ ಪ್ರಶ್ನೆಗಳಿಗೆ ಮೂರು – ನಾಲ್ಕು ವಾಕ್ಯಗಳಲ್ಲಿ ಉತ್ತರ ಬರೆಯಿರಿ 10x2=20**

18. **ರಾಮನು ಗಿರಿವನವನ್ನು ಏನೆಂದು ಪ್ರಾರ್ಥಿಸಿದನು ?**
**ಉತ್ತರ:** ರಾಮನು "ಎಲೈ ಗಿರಿ ವನವೇ ನಾನು ನಿಮ್ಮನ್ನು ಬೇಡಿಕೊಳ್ಳುತ್ತಿದ್ದೇನೆ ಹೇಳಿರಿ ನನ್ನ ಪ್ರೀತಿಯ ರಾಣಿ ಸೀತೆಯು ದೊರೆಯುವಳೇ? ದೊರೆಯುವುದಿಲ್ಲವೋ? ಅವಳು ಇರುವ ನೆಲೆ ಯಾರಾದರೂ ತಿಳಿದಿರು ವಿರಾ. ನನ್ನ ಹೃದಯದ ಈ ದುಃಖವು ನಾಶವಾಗುತ್ತಿಲ್ಲವಲ್ಲ." ಎಂದು ಗಿರಿವನಗಳನ್ನು ಪ್ರಾರ್ಥಿಸುತ್ತಾನೆ.

19. **ಮದಲಿಂಗನ ಕಣಿವೆಯಲ್ಲಿ ಬರುವಾಗ ಶಾನುಭೋಗರು ಏನೆಂದು ಯೋಚಿಸಿದರು ?**
**ಉತ್ತರ:** ಶಾನುಭೋಗರು ತಮ್ಮ ಹಳ್ಳಿಯನ್ನು ತಲಪಬೇಕಾದರೆ ಮದಲಿಂಗನ ಕಣಿವೆಯನ್ನು ದಾಟಿ ಹೋಗಬೇಕಿತ್ತು. ಅದು ಕಾಡುದಾರಿ, ಆದರೂ ಬೆಳುದಿಂಗಳ ದಿನ ; ಆ ಮದಲಿಂಗನ ಕಣಿವೆಯಲ್ಲಿ ಬರುವಾಗ ಸ್ವಲ್ಪ ದೊಡ್ಡ ಹೆಜ್ಜೆ ಹಾಕಿದರೆ ಊಟದ ಹೊತ್ತಿಗೆ ಊರು ಸೇರಿಕೊಳ್ಳಬಹುದು ಎಂದು ಯೋಚಿಸಿದರು.

20. **ದುಷ್ಟಬುದ್ಧಿಯು ತನ್ನ ತಂದೆಗೆ ಏಕಾಂತದಲ್ಲಿ ಏನೆಂದು ಹೇಳಿದನು ?**
**ಉತ್ತರ:** ದುಷ್ಟಬುದ್ಧಿಯು ತನ್ನ ತಂದೆಗೆ ಏಕಾಂತದಲ್ಲಿ ಕರೆದುಕೊಂಡು ಹೋಗಿ "ನಿಮ್ಮ ಒಂದು ಮಾತಿನಿಂದ ನಮ್ಮ ಪರಿಜನರೆಲ್ಲರೂ (ಮನೆಯವರೆಲ್ಲರೂ) ಹಲವು ಕಾಲ ಹಸಿಯದೆ ಊಟಮಾಡಿ ಬಾಳುವಷ್ಟು ಹಣವು ಲಭಿಸುವುದು. ನೀವು ಆ ಮರದ ಪೊಟರೆಯಲ್ಲಿ ಅವಿತುಕೊಂಡು ಧರ್ಮಬುದ್ಧಿಯೇ ಹೊನ್ನನ್ನು ತೆಗೆದುಕೊಂಡು ಹೋದನು ಎಂದು ಹೇಳಿ" ಎಂದು ಹೇಳಿದನು.

21. **ಸುಕುಮಾರಸ್ವಾಮಿಯು ಹೇಗೆ ಸುಖಭೋಗಗಳನ್ನು ಅನುಭವಿಸುತ್ತಿದ್ದನು ?**
**ಉತ್ತರ:** ಸುಕುಮಾರಸ್ವಾಮಿಯು ಯುವಕನಾಗಿ ಅತ್ಯಂತ ರೂಪ, ಲಾವಣ್ಯ, ಸೌಭಾಗ್ಯ, ಕಾಂತಿಯಿಂದ ಕೂಡಿದವನಾಗಿದ್ದು ಆತನಿಗೆ ಮೂವತ್ತೆರಡು ಲತಾಗೃಹಗಳು, ಅತ್ಯಂತ ರೂಪ, ಲಾವಣ್ಯ, ಸೌಭಾಗ್ಯ, ಕಾಂತಿ, ಹಾವಭಾವ ವಿಲಾಸದಿಂದ ಸೌಂದರ್ಯಗಳ ಒಡತಿಯರಾದ ದೇವಲೋಕದ ಅಪ್ಸರ ಸ್ತ್ರೀಯರನ್ನೇ ಹೋಲುವಂತಹ ಮೂವತ್ತೆರಡು ದಿವ್ಯಸ್ತ್ರೀಯರು (ಹೆಂಡತಿಯರು) ಇದ್ದರು. ಮೂವತ್ತೆರಡು

ನಾಟ್ಯಶಾಲೆಗಳು, ಮೂವತ್ತೆರಡು ಕೋಟಿ ಸಂಪತ್ತು, ಪಂಚರತ್ನಗಳು ಇದ್ದವು. ಇವುಗಳೊಂದಿಗೆ ಕೂಡಿ ಭೋಗೋಪಭೋಗ ಸುಖಗಳನ್ನು ಅನುಭವಿಸುತ್ತಿದ್ದನು.

22. **ಕೃಷ್ಣನು ಕರ್ಣನ ಮನದಲ್ಲಿ ಯಾವ ರೀತಿಯಲ್ಲಿ (ಉ)ಭಯವನ್ನು ಬಿತ್ತಿದನು** ?
**ಉತ್ತರ:** ಕೃಷ್ಣನು, "ಕರ್ಣ ನಿಮ್ಮೊಳಗೆ (ಪಾಂಡವರು) ಯಾದವರೊಳಗೆ, ಕೌರವರೊಳಗೆ ಯಾವುದೇ ವ್ಯತ್ಯಾಸ ಇಲ್ಲ. ವಂಶವನ್ನು ಪ್ರತಿಪಾದಿಸಿ ಹೇಳುವುದಾದರೆ ಮೊದಲೆರಡಿಲ್ಲ. ನಿನ್ನಾಣೆಗೂ ನೀನು ಈ ಭೂಮಿಯ ಒಡೆಯ, ನಿನ್ನ ಮನಸ್ಸಿನಲ್ಲಿ ಇದರ ಅರಿವು ಯಾವುದು ಇಲ್ಲ." ಎನ್ನುತ್ತ (ಉ)ಭಯವನ್ನು ಬಿತ್ತಿದನು.

23. **ಪರಶುರಾಮನು ಮಣ್ಣಿನ ಪಾತ್ರೆಯಲ್ಲಿ ಅರ್ಘ್ಯವನ್ನು ಕೊಡಲು ಕಾರಣವೇನು** ?
**ಉತ್ತರ:** ಪರುಶುರಾಮನು ಒಡವೆಗಳನ್ನೆಲ್ಲ ಬೇಡಿದವರಿಗೆ ಕೊಟ್ಟಿದ್ದನು. ಭೂಮಂಡಲವನ್ನು ಗುರುಗಳಿಗೆ ಕೊಟ್ಟಿದ್ದನು. ಅವನಲ್ಲಿ ಒಂದಡಕೆಯೂ ಇರಲಿಲ್ಲ. ಕನಕಪಾತ್ರೆ ಇಲ್ಲದಿರುವುದರಿಂದ ಮಣ್ಣಿನ ಪಾತ್ರೆಯಲ್ಲಿ ಅರ್ಘ್ಯವನ್ನು ಕೊಟ್ಟನು.

24. **ವಸಂತ ಮುಖ ತೋರಲಿಲ್ಲ ಕವನದಲ್ಲಿ ಪ್ರಕೃತಿಯ ಸಂಭ್ರಮ ಹೇಗೆ ವ್ಯಕ್ತವಾಗಿದೆ** ?
**ಉತ್ತರ:** ಒಡೆಯನ ಮನೆಯ ಅಂಗಳದಲಿ ಮಾವಿನ ಮರಗಳು (ಹಚ್ಚಹಸುರಾಗಿ) ಮೈ ತುಂಬಿ ನಿಂತವೆ. ಆ ಪ್ರಕೃತಿಯ ಮಡಿಲಲ್ಲಿ ಹಕ್ಕಿಗಳು ರೆಕ್ಕೆ ಬಿಚ್ಚಿ ಹಾರುತ್ತಿವೆ. ಪ್ರಕೃತಿಯ ಸೊಬಗನ್ನು ಕೋಗಿಲೆಗಳು ಮನದುಂಬಿ ಹಾಡುತ್ತಿವೆ. ಈ ಭೂಮಿಗೆ ಕಡಲು ಉಕ್ಕಿ ಹರಿಯುವ ಸಂಭ್ರಮ ವ್ಯಕ್ತವಾಗಿದೆ.

25. **ಜಲಿಯನ್ ವಾಲಾಭಾಗ್‌ಗೆ ಬಂದ ಬಾಲಕ ಭಗತ್ ಸಿಂಗ್ ಏನು ಮಾಡಿದನು** ?
**ಉತ್ತರ:** ಜಲಿಯನ್ ವಾಲಾಬಾಗ್ ಹತ್ಯಾಕಾಂಡಲ್ಲಿ ಪ್ರಾಣ ಕಳೆದುಕೊಂಡಿದ್ದವರಿಗೆ ನಮನ ಸಲ್ಲಿಸಲು ಹೋಗಿದ್ದ ಭಗತ್‌ಸಿಂಗ್. ಹನ್ನೆರಡು ವರ್ಷದ ಬಾಲಕ ಭಗತ್ ಸಿಂಗ್ ಅಮೃತಸರದ ಜಲಿಯನ್ ವಾಲಾಬಾಗ್‌ನಲ್ಲಿ ಮೂಕನಂತೆ ಅತ್ತಿಂದಿತ್ತ ಓಡಾಡುತ್ತಿದ್ದ. ತುಸು ಹೊತ್ತಿನ ನಂತರ ಭಗತ್ ಸಿಂಗ್ ಅಲ್ಲಿ ಒಂದೆಡೆ ಅಂತರ್ಮುಖಿಯಾಗಿ ಬಹುಕಾಲ ನಿಂತ. ನಂತರ ಅಲ್ಲಿದ್ದ ಸ್ವಲ್ಪ ಮಣ್ಣನ್ನು ತೆಗೆದುಕೊಂಡು ಹಣೆಗಿಟ್ಟುಕೊಂಡ. ಇನ್ನಷ್ಟು ಮಣ್ಣನ್ನು ತನ್ನಲ್ಲಿದ್ದ ಡಬ್ಬಿಯಲ್ಲಿ ಶೇಖರಿಸಿಕೊಂಡು ಮನೆಗೆ ಹಿಂತಿರುಗಿದನು.

26. **ವರ್ತಕ ಗುಲಾಬಿ ಹೂವನ್ನು ಕಿತ್ತುಕೊಂಡಾಗ ಮೃಗ ಏನು ಹೇಳಿತು** ?
**ಉತ್ತರ :** ವರ್ತಕ ತನ್ನ ಮಗಳು ಸುಂದರಿಗೆ ಗುಲಾಬಿ ಹೂವೊಂದನ್ನು ಕಿತ್ತಾಗ ಅಲ್ಲಿದ್ದ ಮೃಗವೊಂದು "ತಿಂದಿದ್ದೀ; ತೇಗಿದ್ದೀ; ಗುಲಾಬಿ ಕಿತ್ತಿದ್ದೀ" ಎಂದು ಸಿಟ್ಟಿನಿಂದ ಅಬ್ಬರಿಸಿ "ಕೇಳು! ನಿನ್ನ ಬದಲಾಗಿ ನಿನ್ನ ಮುದ್ದು ಮಗಳನ್ನು ತಂದು ಕೊಟ್ಟರೆ ನಿನ್ನನ್ನು ಕೊಲ್ಲುವುದಿಲ್ಲ. ನೀನು ತಪ್ಪಿಸಿಕೊಳ್ಳಲಾರೆ. ಈ ಬುಟ್ಟಿ ತೆಗೆದುಕೋ. ಇದರೊಂದಿಗೆ ಹೋಗು ನಾಳೆ ಸಂಜೆ ಒಳಗೆ ನಿನ್ನ ಮಗಳನ್ನು ಕರೆತರದಿದ್ದರೆ ನಿನ್ನನ್ನು ನಿನ್ನ ಮಗಳನ್ನು ಒಟ್ಟಿಗೇ ಮುಗಿಸುತ್ತೇನೆ!" ಅಂದಿತು.

27. **ಒಗಟುಗಳಿಂದ ಶೈಕ್ಷಣಿಕವಾಗಿ ಏನು ಲಾಭ** ?
**ಉತ್ತರ:** ಒಗಟುಗಳಿಂದ ಚಿಂತನೆ ಮಾಡುವ ಮನೋಭಾವ ಹೆಚ್ಚುತ್ತದೆ. ಉತ್ತರ ಕಂಡುಕೊಳ್ಳಲು ಮನಸ್ಸು ವಿವಿಧ ರೀತಿಯಲ್ಲಿ ಆಲೋಚಿಸುತ್ತದೆ. ಮುದುಡಿದ ಮನಸ್ಸನ್ನು ಅರಳಿಸಲು, ಮನೋರಂಜನೆ ನೀಡಲು ಒಗಟುಗಳು ಸಹಾಯಕವಾಗುತ್ತವೆ. ಜನಪದರ ಬುದ್ಧಿವಂತಿಕೆಯನ್ನು ತಿಳಿಯುವುದರ ಜೊತೆಗೆ ಒಂದು ವಸ್ತುವನ್ನು ಹೇಗೆಲ್ಲ ಬಣ್ಣಿಸಬಹುದೆಂಬ ಚಿಂತನೆ ಮೂಡುತ್ತದೆ.

**V. ಕೆಳಗಿನ ಕವಿ/ ಸಾಹಿತಿಗಳ ಸ್ಥಳ, ಕಾಲ, ಕೃತಿ ಮತ್ತು ಪ್ರಶಸ್ತಿ/ಬಿರುದುಗಳನ್ನು ಕುರಿತು ವಾಕ್ಯರೂಪದಲ್ಲಿ ಬರೆಯಿರಿ.** **2x3=6**

**28. ಪು.ತಿ.ನರಸಿಂಹಾಚಾರ್ಯ :** ಪು.ತಿ.ನ. ಕಾವ್ಯನಾಮದಿಂದ ಪ್ರಸಿದ್ಧರಾಗಿರುವ ಪುರೋಹಿತ ತಿರುನಾರಾಯಣಯ್ಯಂಗಾರ್ಯ ನರಸಿಂಹಾಚಾರ್ ಇವರು **ಕ್ರಿ.ಶ.1905**ರಲ್ಲಿ **ಮಂಡ್ಯ ಜಿಲ್ಲೆಯ ಮೇಲುಕೋಟೆ** ಎಂಬ ಊರಿನಲ್ಲಿ ಜನಿಸಿದ್ದಾರೆ. ಇವರು **ಶಬರಿ, ಅಹಲ್ಯೆ, ಗೋಕುಲ ನಿರ್ಗಮನ, ವಿಕಟಕವಿವಿಜಯ,**

**ಹಂಸದಮಯಂತಿ ಮತ್ತು ಇತರ ರೂಪಕಗಳು, ಹಣತೆ, ರಸಸರಸ್ವತಿ, ಗಣೇಶದರ್ಶನ, ಶಾರದಯಾಮಿನಿ, ಶ್ರೀಹರಿಚರಿತೆ, ರಥಸಪ್ತಮಿ** ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಇವರ ಹಂಸದಮಯಂತಿ ಮತ್ತು ಇತರ ರೂಪಕಗಳು ಕೃತಿಗೆ **'ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ'** ಹಾಗೂ ಶ್ರೀಹರಿಚರಿತೆ ಕಾವ್ಯಕ್ಕೆ **'ಪಂಪಪ್ರಶಸ್ತಿ'** ಗಳನ್ನು ಪಡೆದಿದ್ದಾರೆ.

**29. ಕುಮಾರವ್ಯಾಸ :** ಕುಮಾರವ್ಯಾಸ ಎಂದೇ ಪ್ರಸಿದ್ಧನಾಗಿರುವ ಗದುಗಿನ ನಾರಾಣಪ್ಪ **ಕ್ರಿ.ಶ.1430**ರಲ್ಲಿ ಗದಗ ಪ್ರಾಂತದ **ಕೋಳಿವಾಡ**ದಲ್ಲಿ ಜನಿಸಿದನು. ವ್ಯಾಸರ ಮಹಾಭಾರತವನ್ನು ಕನ್ನಡದಲ್ಲಿ (ಮೊದಲ ಹತ್ತು ಪರ್ವ) ರಚಿಸಿದ್ದರಿಂದ ಕುಮಾರವ್ಯಾಸ ಎಂಬ ಅಭಿದಾನಕ್ಕೆ ಪಾತ್ರನಾದ. **'ಕರ್ಣಾಟಭಾರತಕಥಾ ಮಂಜರಿ'** ಈತನ ಪ್ರಸಿದ್ಧ ಕೃತಿ. ಇದಕ್ಕೆ **ಕನ್ನಡಭಾರತ, ಗದುಗಿನ ಭಾರತ, ಕುಮಾರವ್ಯಾಸ ಭಾರತ** ಎಂಬ ಹೆಸರಿನಿಂದಲೂ ಕರೆಯಲಾಗುತ್ತದೆ, ಈತ ಐರಾವತ ಎಂಬ ಕೃತಿಯನ್ನು ರಚಿಸಿದ್ದಾನೆಂದು ತಿಳಿದುಬಂದಿದೆ. ತನ್ನ ಕೃತಿಯಲ್ಲಿ ರೂಪಕಾಲಂಕಾರವನ್ನು ನಿರರ್ಗಳವಾಗಿ ಪ್ರಯೋಗಿಸಿ **'ರೂಪಕಸಾಮ್ರಾಜ್ಯ ಚಕ್ರವರ್ತಿ'** ಎಂಬ ಬಿರುದನ್ನು ಪಡೆದಿದ್ದಾನೆ. ವೀರನಾರಾಯಣನ ಪರಮಭಕ್ತನಾದ ಈತ ಭಾಗವತ ಸಂಪ್ರದಾಯವನ್ನು ಸರಳ, ಸುಂದರ ಹಾಗೂ ರಂಜನೀಯವಾಗಿ ಪರಿಚಯಿಸಿ ಜನಪ್ರಿಯಗೊಳಿಸಿದ್ದಾನೆ. ನಡುಗನ್ನಡ ಕಾವ್ಯ ಪರಂಪರೆಯಲ್ಲಿ ಗದುಗಿನ ಭಾರತ ಅತ್ಯಂತ ಜನಪ್ರಿಯವಾದ ಮಹಾಕಾವ್ಯ.

**VI. ಕೆಳಗಿನ ಪದ್ಯಭಾಗಕ್ಕೆ ಪ್ರಸ್ತಾರ ಹಾಕಿ, ಗಣ ವಿಭಾಗ ಮಾಡಿ, ಛಂದಸ್ಸಿನ ಹೆಸರನ್ನು ಬರೆಯಿರಿ. 1x3=3**

30.

| | | |
|---|---|---|
| **UUUU<br>ಅತಿಕುಟಿ** | **U U –<br>ಲ ಮನಂ** | **UU –<br>ಧನಲು** |

| | | | | |
|---|---|---|---|---|
| **UU –<br>ಬ್ಧತೆಯಿಂ** | **– –<br>ದಂದು** | **U – U<br>ಷ್ಟಬುದ್ಧಿ** | **U U –<br>ನುಡಿದಂ** | **U U –<br>ಪುಸಿಯಂ** |

**ಛಂದಸ್ಸು –** ಇದು ಕಂದಪದ್ಯದ ಲಕ್ಷಣ ಹೊಂದಿದೆ ಆದ್ದರಿಂದ ಇದು ಕಂದ ಪದ್ಯ.

**VII. ಕೆಳಗಿನ ವಾಕ್ಯದಲ್ಲಿರುವ ಅಲಂಕಾರವನ್ನು ಹೆಸರಿಸಿ, ಲಕ್ಷಣ ಬರೆದು ಸಮನ್ವಯಗೊಳಿಸಿರಿ. 1x3=3**

31. **" ಒಳಗಿನ ಮಂದಿ ಗುಂಡು ಹೊಡಿದರೊ ಮುಂಗಾರಿ ಸಿಡಿಲ ಸಿಡಿದ್ಹಾಂಗ "**

**ಅಲಂಕಾರ :– ಉಪಮಾಲಂಕಾರ**

**ಉಪಮೇಯ :–** ಒಳಗಿನ ಮಂದಿ ಗುಂಡು ಹೊಡೆಯುವುದು

**ಉಪಮಾನ :– ಮುಂಗಾರಿನ** ಸಿಡಿಲು ಸಿಡಿಯುವುದು

**ಉಪಮಾ ವಾಚಕ :–**ಹಾಂಗ

**ಸಮಾನ ಧರ್ಮ :–**ಸಿಡಿಯುವುದು

**ಸಮನ್ವಯ:– ಇಲ್ಲಿ ಉಪಮೇಯವಾದ** ಒಳಗಿನ ಮಂದಿ ಗುಂಡು ಹೊಡೆಯುವುದನ್ನು ಉಪಮಾನವಾದ ಮುಂಗಾರಿನ ಸಿಡಿಲು ಸಿಡಿಯುವುದಕ್ಕೆ ಪರಸ್ಪರ ಹೋಲಿಸಿ ವರ್ಣಿಸಲಾಗಿದೆ.

**ಲಕ್ಷಣ :– ಎರಡು ವಸ್ತುಗಳಿಗಿರುವ ಸಾದೃಶ್ಯಸಂಪತ್ತನ್ನು ಹೋಲಿಸಿ ವರ್ಣಿಸಿದರೆ ಅದು ' ಉಪಮಾಲಂಕಾರ'**

**VIII. ಈ ಕೆಳಗೆ ಕೊಟ್ಟಿರುವ ಗಾದೆಗಳಲ್ಲಿ ಯಾವುದಾದರೂ ಒಂದನ್ನು ಗಾದೆಯ ಮಹತ್ವದೊಂದಿಗೆ ವಿಸ್ತರಿಸಿ ಬರೆಯಿರಿ. 1x3=3**

32. **ತಾಳಿದವನು ಬಾಳಿಯಾನು**

**ಉತ್ತರ:** ಗಾದೆ ವೇದಗಳಿಗೆ ಸಮಾನ, ಗಾದೆ ಹಿರಿಯರು ಮತ್ತು ಜನಪದರ ಜೀವನದ ಅನುಭವದ ನುಡಿ ಮುತ್ತುಗಳು. ಗಾದೆಗಳು ಆಕಾರದಲ್ಲಿ ವಾಮನನಾದರೂ ಅರ್ಥದಲ್ಲಿ ತ್ರಿವಿಕ್ರಮನಂತೆ. **ತಾಳಿದವನು ಬಾಳಿಯಾನು** ಎಂಬ ಈ ಮೇಲಿನ ಗಾದೆಯು ಪ್ರಸಿದ್ಧವಾಗಿದೆ.

ತಾಳುವಿಕೆಗಿಂತ ಬೇರೊಂದು ತಪಸ್ಸು ಇಲ್ಲ, ತಾಳ್ಮೆಯೇ ನಿಜವಾದ ತಪಸ್ಸು. **" ತಲ್ಲಣಿಸದಿರು ಕಂಡ್ಯ ತಾಳು ಮನವೆ "** ಎಂದಿದ್ದಾರೆ ಕನಕದಾಸರು. ಶಬರಿ ತಾಳ್ಮೆಯಿಂದ ಸಾಕಷ್ಟು ವರ್ಷಗಳು ಕಾದಿದ್ದಕ್ಕೆ ಶ್ರೀರಾಮನ ದರ್ಶನದಿಂದ ಮುಕ್ತಿ ದೊರೆಯಿತು. ತಾಳ್ಮೆಯಿಂದ ಯೋಚಿಸಿದ ಧರ್ಮಬುದ್ಧಿ ಸತ್ಯವನ್ನು ತೋರಿಸಿದನು. ಆದ್ದರಿಂದ ತಾಳ್ಮೆ ಬಹಳ ಮುಖ್ಯವಾದ ವಸ್ತು ಇದ್ದ ಹಾಗೆ. ಗಿಡ ನೆಟ್ಟ ಕೂಡಲೇ ಮರವಾಗಿ ಫಲ ಬಿಡಬೇಕು ಎಂದರೆ ಸಾಧ್ಯವಿಲ್ಲ. ಸಂಗೀತಾಭ್ಯಾಸ ಮಾಡಿದರೆ ಒಂದೇ ತಿಂಗಳಿನಲ್ಲಿ ಕಛೇರಿ ನೀಡುವಂತಾಗಬೇಕು ಎನ್ನುವುದು ಸಾಧ್ಯವಿಲ್ಲ. ಪ್ರತಿಯೊಂದು ಸಾಧನೆಯಲ್ಲೂ ತಾಳ್ಮೆ ಬೇಕು. ತಾಳ್ಮೆ ಎಂದರೆ ಆಮೆಗತಿಯಲ್ಲಿ ಸಾಗುವುದು ಎಂದರ್ಥವಲ್ಲ. ಯಾವ ಸಾಧನೆಗೆ ಎಷ್ಟು ಸಮಯ ಮತ್ತು ಪ್ರಯತ್ನಗಳು ಬೇಕೋ ಅವನ್ನು ಪೂರ್ಣತೆಯಿಂದ ಮಾಡಲು ಬೇಕಾಗುವ ಶಕ್ತಿಯೇ ತಾಳ್ಮೆ. ತಾಳ್ಮೆಯಿಂದ ಕಟ್ಟಿದ್ದು ಮತ್ತು ಪಡೆದಿದ್ದು ದೀರ್ಘಕಾಲ ಬಾಳುತ್ತದೆ. ತಾಳ್ಮೆಗೆಟ್ಟು ಕೋಪದ ಕೈಯಲ್ಲಿ ನಮ್ಮ ಮನಸ್ಸನ್ನು ನೀಡಿದರೆ ಅನಾಹುತವಾಗುವುದರಲ್ಲಿ ಸಂದೇಹವಿಲ್ಲ. ತಾಳ್ಮೆಯಿಂದ ಯೋಚಿಸಿದಾಗ ಒಳ್ಳೆಯ ಕಾರ್ಯಗಳು ಫಲ ಪ್ರದವಾಗುತ್ತವೆ. ಮಾಡಬೇಕಾದ ಕಾರ್ಯಗಳಿಗೆ ಯೋಜನೆಗಳು ಹೊಳೆಯುತ್ತವೆ.

ಆದ್ದರಿಂದ ತಾಳ್ಮೆ ಪ್ರತಿಯೊಬ್ಬರಲ್ಲಿ ಇರಬೇಕಾದ ಅತ್ಯಮೂಲ್ಯವಾದ ಸಂಪತ್ತು ಎಂದೇ ಭಾವಿಸಿ ಕೊಂಡು ತಾಳ್ಮೆಯಿಂದ ಬಾಳಬೇಕು ಎಂದು ಹೇಳಬಹುದು.

**ಅಥವಾ**

**ಕೋಪದಲ್ಲಿ ಕೊಯ್ದ ಮೂಗು ಮತ್ತೆ ಬಂದಿತೇ**

**ಉತ್ತರ :** ಗಾದೆ ವೇದಗಳಿಗೆ ಸಮಾನ , ಗಾದೆ ಹಿರಿಯರು ಮತ್ತು ಜನಪದರ ಜೀವನದ ಅನುಭವದ ನುಡಿಮುತ್ತುಗಳು. ಗಾದೆಗಳು ಆಕಾರದಲ್ಲಿ ವಾಮನನಾದರೂ ಅರ್ಥದಲ್ಲಿ ತ್ರಿವಿಕ್ರಮನಂತೆ. ಗಾದೆಗಳು ಜೀವನದನುಭವಕ್ಕೆ ಹಿಡಿದ ಕನ್ನಡಿಯಾಗಿವೆ. ಆದುದರಿಂದ ಗಾದೆಗಳು ಸತ್ಯಕ್ಕೆ ಬಹಳ ಹತ್ತಿರವಾಗಿವೆ. ಇಂತಹ ಗಾದೆಗಳಲ್ಲಿ ಒಂದಾದ **ಕೋಪದಲ್ಲಿ ಕೊಯ್ದ ಮೂಗು ಮತ್ತೆ ಬಂದಿತೇ** ಎಂಬುದು ನೀತಿ ಬೋಧಕವಾಗಿದೆ.

ಕೋಪವೆಂಬುದು ಅನರ್ಥಕಾರಿ ಸಾಧನವಾಗಿದೆ. ಕೋಪಕ್ಕೆ ಒಳಗಾದ ಮನುಷ್ಯನು ಏನು ಮಾಡುತ್ತಿದ್ದೇನೆ ಎಂಬುದನ್ನು ಮರೆತಿರುತ್ತಾನೆ. **"ಕ್ರೋಧ ಬುದ್ಧಿಯನ್ನು ತಿನ್ನುತ್ತದೆ"** ಅನ್ನುವ ಹಾಗೆ ಅತಿಯಾದ ಕೋಪ ಮನುಷ್ಯನ ಬುದ್ಧಿಯನ್ನು ಕೆಡಿಸುತ್ತದೆ. ಭಗವದ್ಗೀತೆಯಲ್ಲಿ ಶ್ರೀ ಕೃಷ್ಣ **'ಕೋಪದಿಂದ ಬುದ್ಧಿ ನಾಶ'** ಎಂದಿದ್ದಾನೆ. ಅದೇ ರೀತಿ ಬಸವಣ್ಣ **'ತನುವಿನ ಕೋಪ ತನ್ನ ಹಿರಿತನದ ಕೇಡು, ಮನದ ಕೋಪ ತನ್ನ ಅರಿವಿನ ಕೇಡು'** ಎಂದಿದ್ದಾರೆ. ಕೋಪ ಬಂದಾಗ ಆಗುವ ಅನಾವುತಗಳು ಅನೇಕ ಕೋಪದಲ್ಲಿ ಮೂಗನ್ನು ಕೊಯ್ದು ಕೊಂಡರೆ ಮತ್ತೇ ಬೇಕೆಂದರೂ ಪಡೆಯಲು ಸಾಧ್ಯವಿಲ್ಲ.ಇದಕ್ಕೆ ಮುಂಗುಸಿ ನಾರಿಯ ಕಥೆಯೆ ಸಾಕ್ಷಿ ಆದ್ದರಿಂದ ಶಿವಶರಣೆ ಅಕ್ಕಮಹಾದೇವಿ ಹೇಳುವಂತೆ **'ಕೋಪ ತಾಳದೆ ಸಮಧಾನಿಯಾಗಿರ ಬೇಕು'** ಇಲ್ಲವಾದರೆ ಕೋಪದ ಕೈಯಲ್ಲಿ ಬುದ್ಧಿಯನ್ನು ಕೊಟ್ಟರೆ ಮಂಗನಿಗೆ ಹೆಂಡ ಕುಡಿಸಿದಂತಾಗುತ್ತದೆ.

ಒಟ್ಟಿನಲ್ಲಿ ಗೀತೆಯು ಹೇಳುವಂತೆ ಕೋಪದಿಂದ ಬುದ್ಧಿನಾಶ, ಬುದ್ಧಿನಾಶವಾದ ಮನುಷ್ಯನು ಸಂಪೂರ್ಣವಾಗಿ ನಾಶವಾಗುತ್ತಾನೆ. ಆದ್ದರಿಂದ ಕೋಪ ಮಾಡಿಕೊಳ್ಳದೆ ಸಮಧಾನಿಯಾಗಿರ ಬೇಕು.

**IX. ಕೆಳಗಿನ ವಾಕ್ಯ ಅಥವಾ ಹೇಳಿಕೆಗಳಿಗೆ ಸಂದರ್ಭ ಮತ್ತು ಸ್ವಾರಸ್ಯಗಳನ್ನು ಬರೆಯಿರಿ.** **6x3=18**

33. **"ನಿಮ್ಮ ದೇಶದ ಗೌರವವನ್ನು ಕಾಯಿರಿ! ಇದು ದೊಡ್ಡದಾದ ರಾಷ್ಟ್ರ "**

**ಆಯ್ಕೆ:–** ಈ ವಾಕ್ಯವನ್ನು **'ವಿ.ಕೃ.ಗೋಕಾಕ್'** ಅವರು ರಚಿಸಿರುವ **'ಸಮುದ್ರದಾಚೆಯಿಂದ'** ಎಂಬ ಪ್ರವಾಸ ಕಥನದಿಂದ ಆಯ್ದ **'ಲಂಡನ್ ನಗರ'** ಎಂಬ ಪಾಠದಿಂದ ಆರಿಸಲಾಗಿದೆ.

**ಸಂದರ್ಭ:–** ಲೇಖಕರು ಲಂಡನ್ ನಗರದ ಬೀದಿಬೀದಿಯಲ್ಲಿ, ಮೂಲೆಮೂಲೆಯಲ್ಲಿ ನಿಲ್ಲಿಸಿದ ಇತಿಹಾಸ ಪ್ರಸಿದ್ಧ ಪುರುಷರ ಶಿಲಾಪ್ರತಿಮೆಗಳ'ನ್ನು ನೋಡಿದಾಗ ತಮ್ಮ ದೇಶಕ್ಕಾಗಿ ಜೀವನವನ್ನು ಲೆಕ್ಕಿಸದೆ ದುಡಿದು ಕೈಯೆತ್ತಿ ನಿಂತ ಆ ಪ್ರತಿಮೆಗಳು "ನಿಮ್ಮ ದೇಶದ ಗೌರವವನ್ನು ಕಾಯಿರಿ! ಇದು ದೊಡ್ಡದಾದ ರಾಷ್ಟ್ರ" ಎಂದು ಹೇಳುತ್ತಿರುವಂತೆ ತೋರುತ್ತದೆ ಎಂದು ಹೇಳುವ ಸಂದರ್ಭದಲ್ಲಿ ಈ ಮಾತು ಬಂದಿದೆ.

**ಸ್ವಾರಸ್ಯ:–** ಇಂಗ್ಲೆಂಡ್ ರಾಷ್ಟ್ರಕ್ಕಾಗಿ ದುಡಿದ ನಾಯಕರು ತಮ್ಮ ದೊಡ್ಡ ದೇಶದ ಗೌರವವನ್ನು ಹೆಮ್ಮೆಯಿಂದ ಕಾಪಾಡಲು ಹೇಳಿದಂತಿರುವುದನ್ನು ಲೇಖಕರು ಸ್ವಾರಸ್ಯಪೂರ್ಣ ಅಭಿವ್ಯಕ್ತಪಡಿಸಿದ್ದಾರೆ.

34. **''ಸಾಮಾಜಿಕ ಕಾನೂನುಗಳ ಹರಿಕಾರ."**

**ಆಯ್ಕೆ:–** ಈ ವಾಕ್ಯವನ್ನು **"ಭಾಗ್ಯಶಿಲ್ಪಿಗಳು"** ಪಾಠದಲ್ಲಿನ **' ಪಠ್ಯಪುಸ್ತಕ ರಚನಾ ಸಮಿತಿ '** ಯವರು ಆಯ್ಕೆ ಮಾಡಿ ಕೊಟ್ಟಿರುವ **"ನಾಲ್ವಡಿ ಕೃಷ್ಣರಾಜ ಒಡೆಯರ್"** ಎಂಬ ಪಾಠಭಾಗದಿಂದ ಆರಿಸಲಾಗಿದೆ.

**ಸಂದರ್ಭ:–** ನಾಲ್ವಡಿ ಕೃಷ್ಣರಾಜ ಒಡೆಯರು ಸಮಾಜದ ಅಭಿವೃದ್ಧಿಗಾಗಿ ಮತ್ತು ಸಾಮಾಜಿಕ ಅನಿಷ್ಟ ಪದ್ಧತಿಗಳನ್ನು ಹೋಗಲಾಡಿಸಲು ಸಹಕಾರಿ ಕಾರ್ಮಿಕ ಪರಿಹಾರ ಕಾಯ್ದೆ, – ಮೈಸೂರು ಗ್ರಾಮ ನ್ಯಾಯಾಲಯ ಕಾಯ್ದೆ, ಗ್ರಾಮ ಪಂಚಾಯಿತಿಗಳ ಕಾಯ್ದೆ, ವೇಶ್ಯಾ ವೃತ್ತಿ ತಡೆಗಟ್ಟುವ ಕಾಯ್ದೆ; ವಿಧವಾ ಮರು ವಿವಾಹ ಕಾಯ್ದೆ ಮುಂತಾದ ಕಾನೂನುಗಳನ್ನು ಜಾರಿಗೆ ತಂದು ಮೈಸೂರು ಸಂಸ್ಥಾನವನ್ನು ಮಾದರಿ ಸಂಸ್ಥಾನವನ್ನಾಗಿ ರೂಪಿಸಿದ್ದರಿಂದ 'ಸಾಮಾಜಿಕ ಕಾನೂನುಗಳ ಹರಿಕಾರ' ಎಂದು ಹೆಸರಾದರು.

**ಸ್ವಾರಸ್ಯ:–** ಸ್ವಾಸ್ಥ ಸಮಾಜಕ್ಕಾಗಿ ಮತ್ತು ಸಮಾಜದ ಸರ್ವತೋಮುಖ ಅಭಿವೃದ್ಧಿಗಾಗಿ ನಾಲ್ವಡಿ ಕೃಷ್ಣರಾಜ ಒಡೆಯರು ತಂದ ಕಾನೂನುಗಳು ಅವರನ್ನು "ಸಾಮಾಜಿಕ ಕಾನೂನುಗಳ ಹರಿಕಾರ" ರನ್ನಾಗಿಸಿದ್ದು ಹೆಮ್ಮೆಯ ವಿಷಯವಾಗಿದೆ.

35. **"ಹಾಗಾದರೆ ಎಲ್ಲರಿಗೂ ಮನೆ ಆಗುವವರೆಗೆ ನನಗೂ ಮನೆ ಬೇಡ."**

**ಆಯ್ಕೆ:** ಈ ವಾಕ್ಯವನ್ನು **ದೇವನೂರ ಮಹಾದೇವ** ಅವರು ಬರೆದ **'ಎದೆಗೆ ಬಿದ್ದ ಅಕ್ಷರ'** ಎಂಬ ಕೃತಿಯಿಂದ ಆಯ್ದ **'ಎದೆಗೆ ಬಿದ್ದ ಅಕ್ಷರ'** ಎಂಬ ಪಾಠದಿಂದ ಆರಿಸಿಕೊಳ್ಳಲಾಗಿದೆ.

**ಸಂದರ್ಭ:** ಈ ವಾಕ್ಯವನ್ನು ಮನೆಮಂಚಮ್ಮ ದೇವತೆ, ತನಗೆ ಗುಡಿ ಕಟ್ಟುತ್ತಿದ್ದ ಜನರಿಗೆ ಹೇಳುತ್ತಾಳೆ. ಒಂದು ಗ್ರಾಮದ ಜನರೆಲ್ಲಾ ಸೇರಿ ತಮ್ಮ ಗ್ರಾಮದೇವತೆ ಮಂಚಮ್ಮಗೆ ಗುಡಿಕಟ್ಟುವಾಗ ಅಲ್ಲಿದ್ದ ಒಬ್ಬನ ಮೈಮೇಲೆ ಆ ಗ್ರಾಮದೇವತೆ ಮಂಚಮ್ಮ ಆವಾಹಿಸಿಕೊಂಡು "ಏನ್ರಯ್ಯಾ ಏನ್ ಮಾಡ್ತಾ ಇದ್ದೀರಿ ?" ಎನ್ನುತ್ತಾಳೆ. ಅಲ್ಲಿನ ಜನರು'ನಿನಗೊಂದು ಗುಡಿಮನೆ ಕಟ್ತಾ ಇದ್ದೀವಿ ತಾಯಿ' ಎಂದು ಹೇಳುತ್ತಾರೆ. ಆಗ ದೇವತೆ "ಓಹೋ, ನನಗೇ ಗುಡಿಮನೆ ಕಟ್ತಾ ಇದ್ದೀರೋ? ಹಾಗಾದರೆ ನಿಮಗೆಲ್ಲಾ ಮನೆ ಉಂಟಾ ನನ್ನ ಮಕ್ಕಳಾ?" ಎಂದು ಕೇಳಿದಾಗ ಒಬ್ಬನು "ನನಗಿಲ್ಲ ತಾಯಿ" ಹೇಳುತ್ತಾನೆ. ಆಗ ಗ್ರಾಮದೇವತೆ ಮಂಚಮ್ಮ **"ಹಾಗಾದರೆ ಎಲ್ಲರಿಗೂ ಮನೆ ಆಗುವವರೆಗೆ ನನಗೂ ಮನೆ ಬೇಡ"** ಎಂದು ಹೇಳಿದ ಸಂದರ್ಭವಾಗಿದೆ.

**ಸ್ವಾರಸ್ಯ :** ತನಗೆ ಗುಡಿಕಟ್ಟುವ ಜನರಿಗೆ ಮನೆ ಇಲ್ಲದ ಮೇಲೆ ತನಗೇಕೆ ಗುಡಿಮನೆ ಎಂದು ಗ್ರಾಮದೇವತೆ ಹೇಳುವ ಈ ಮಾತು ಸಮಾನತೆಯ ತತ್ವವನ್ನು ಪ್ರತಿಬಿಂಬಿಸುತ್ತದೆ.

36. **“ಹಸುರಾದುದು ಕವಿಯಾತ್ಮಂ”**

**ಆಯ್ಕೆ :** ಈ ವಾಕ್ಯವನ್ನು **ಕುವೆಂಪು** ಅವರ **‘ಪಕ್ಷಿಕಾಶಿ’** ಕವನ ಸಂಕಲನದಿಂದ ಆಯ್ದ **‘ಹಸುರು’** ಎಂಬ ಪದ್ಯದಿಂದ ಆರಿಸಲಾಗಿದೆ.

**ಸಂದರ್ಭ:** ಅಶ್ವಯುಜ ಮಾಸದ ನವರಾತ್ರಿಯ ದಿನದಲ್ಲಿ ಹೊಸ ಭೂಮಿಯ ಹಾಗೇ ಕಾಣುವ ನೀಲವರ್ಣದ ಸಮುದ್ರದಂತಿರುವ ಹಸುರಾಗಿರುವ ವನವನ್ನು ನೋಡಿ ಕವಿಯ ಆತ್ಮವೂ ಕೂಡ ಹಸುರಾಗಿ ರಸಪಾನ ಸ್ಥಾನದಲ್ಲಿ ಮಿಂದು ಹೋಗಿದೆ ಎಂದು ಕವಿ ಪ್ರಕೃತಿಯಲ್ಲಿ ವ್ಯಾಪಿಸಿರುವ ಹಸುರಿನ ಬಗ್ಗೆ ವರ್ಣಿಸುವ ಸಂದರ್ಭವಾಗಿದೆ.

**ಸ್ವಾರಸ್ಯ :** ಹಸುರಾಗಿರುವ ವನವನ್ನು ನೋಡಿದ ಕುವೆಂಪು ಅವರ ಆತ್ಮವೂ ಕೂಡ ಹಸುರಾದುದ್ದು ಪ್ರಕೃತಿಯೊಂದಿಗಿನ ಅದ್ವೈತ ಸ್ಥಿತಿಯನ್ನು ಎತ್ತಿತೋರಿಸಿರುವುದು ಸ್ವಾರಸ್ಯಪೂರ್ಣವಾಗಿ ಮೂಡಿಬಂದಿದೆ.

37. **“ನೆಲಕಿಱಿವೆನೆಂದು ಬಗೆದಿರೆ ಚಲಕಿಱಿವೆಂ”**

**ಆಯ್ಕೆ :** ಈ ವಾಕ್ಯವನ್ನು ಮಹಾಕವಿ ‘ **ರನ್ನ** ’ ವಿರಚಿತ “ **ಸಾಹಸ ಭೀಮ ವಿಜಯ** ” ಎಂಬ ಕೃತಿಯಿಂದ ಆಯ್ದ ‘ **ಛಲಮನೆ ಮೆಱೆವೆಂ** ’ ಎಂಬ ಪದ್ಯದಿಂದ ಆರಿಸಿಕೊಳ್ಳಲಾಗಿದೆ.

**ಸಂದರ್ಭ :** ಈ ಮಾತನ್ನು ದುರ್ಯೋಧನನು ಭೀಷ್ಮರಿಗೆ ಹೇಳುತ್ತಾನೆ. ಶರಶಯ್ಯೆಯಲ್ಲಿ ಮಲಗಿದ್ದ ಭೀಷ್ಮರು ದುರ್ಯೋಧನನಿಗೆ ಪಾಂಡವರೊಡನೆ ಸಂಧಿ ಮಾಡಿಕೊಳ್ಳುವ ಸಲಹೆ ನೀಡುತ್ತಾರೆ. ಆದರೆ ದುರ್ಯೋಧನನು “ಅಜ್ಜಾ, ನಿಮಗೆ ನಮಸ್ಕರಿಸಿ ಹೋಗಲೆಂದು ಬಂದೆನು. ನಾನು ಈ ನೆಲಕ್ಕಾಗಿ ಯುದ್ಧ ಮಾಡುವೆನೆಂದು ಭಾವಿಸಿರುವಿರಾ? ನಾನು ಛಲಕ್ಕಾಗಿ ಪಾಂಡವರೊಡನೆ ಹೋರಾಡುವೆನು. ಈ ಭೂಮಿ ನನಗೆ ಪಾಳುಬಿದ್ದ ನೆಲಕ್ಕೆ ಸಮ” ಎಂದು ಹೇಳಿದ ಸಂದರ್ಭವಾಗಿದೆ.

**ಸ್ವಾರಸ್ಯ :** ಈ ಮಾತಿನಲ್ಲಿ ದುರ್ಯೋಧನನ ನೆಲದ ಮೇಲಿನ ವ್ಯಾಮೋಹಕ್ಕಿಂತ ಛಲದ ಗುಣ ಪ್ರತಿಪಾದಿತವಾಗಿರುವುದು ಸ್ವಾರಸ್ಯಪೂರ್ಣವಾಗಿ ಮೂಡಿಬಂದಿದೆ.

38 **“ರಘೂದ್ವಹನ ಸೊಲ್ಗೇಳಿ ನಮಿಸಲ್”**

**ಆಯ್ಕೆ :** ಈ ವಾಕ್ಯವನ್ನು **ಕವಿ ಲಕ್ಷ್ಮೀಶ** ವಿರಚಿತ ‘ **ಜೈಮಿನಿ ಭಾರತ** ’ ಎಂಬ ಕೃತಿಯಿಂದ ಆಯ್ದ **‘ವೀರಲವ’** ಎಂಬ ಪದ್ಯದಿಂದ ಆರಿಸಲಾಗಿದೆ.

**ಸಂದರ್ಭ:** ಶ್ರೀರಾಮನ ಅಶ್ವಮೇಧ ಯಾಗದ ಯಜ್ಞಾಶ್ವವು ಭೂಮಿಯಲ್ಲಿ ಸಂಚರಿಸುತ್ತಾ ವಾಲ್ಮೀಕಿ ಆಶ್ರಮವನ್ನು ಹೇಗೆ ಹೊಕ್ಕಿತು ಎಂದು ವರ್ಣಿಸುವಾಗ ಭುಜಭಲವುಳ್ಳ ದೊರೆಗಳೆಲ್ಲರೂ ಶ್ರೀರಾಮನ ಆಜ್ಞೆಯನ್ನು ಕೇಳಿ, ಹೆದರಿ ಕುದುರೆಗೆ ನಮಸ್ಕರಿಸಿ ಬಿಟ್ಟು ಕಳುಹಿಸಲು, ಶ್ರೀರಾಮನ ಅಶ್ವಮೇಧ ಯಜ್ಞಾಶ್ವವು ವಾಲ್ಮೀಕಿಯ ಆಶ್ರಮವನ್ನು ಹೊಕ್ಕಿತು ಎಂದು ಹೇಳಿದ ಸಂದರ್ಭದಲ್ಲಿ ಕವಿಯು ಈ ಮಾತನ್ನು ಹೇಳುತ್ತಾನೆ.

**ಸ್ವಾರಸ್ಯ:** ಶ್ರೀರಾಮನ ಹೆಸರನ್ನು ಕೇಳಿಯೇ ಆತನ ಯಜ್ಞಾಶ್ವಕ್ಕೆ ನಮಿಸಿದರು ಎಂಬುದು ಶ್ರೀರಾಮನ ಪರಾಕ್ರಮವನ್ನು ಮತ್ತು ಆತನಿಗೆ ತೋರುವ ಗೌರವವನ್ನು ಪರೋಕ್ಷವಾಗಿ ವರ್ಣಿಸಿರುವುದು ಸ್ವಾರಸ್ಯಪೂರ್ಣವಾಗಿದೆ.

**X. ಈ ಕೆಳಗಿನ ಪದ್ಯಭಾಗವನ್ನು ಪೂರ್ಣಗೊಳಿಸಿರಿ** **1x4=4**

**ಕಲುಷಿತವಾದೀ** ನದೀ ಜಲಗಳಿಗೆ
ಮುಂಗಾರಿನ ಮಳೆಯಾಗೋಣ
ಬರಡಾಗಿರವೀ ಕಾಡು ಮೇಡುಗಳ
ವಸಂತವಾಗುತ **ಮುಟ್ಟೋಣ**

**ಅಥವಾ**

**ಮತಗಳೆಲ್ಲವೂ** ಪಥಗಳು ಎನ್ನುವ
ಹೊಸ ಎಚ್ಚರದೊಳು ಬದುಕೋಣ
ಭಯ ಸಂಶಯದೊಳು ಕಂದಿದ ಕಣ್ಣೊಳು
ನಾಳಿನ ಕನಸನು **ಬಿತ್ತೋಣ.**

**XI. ಕೆಳಗಿನ ಪದ್ಯಭಾಗವನ್ನು ಓದಿ ಅರ್ಥಮಾಡಿಕೊಂಡು, ಅಡಕವಾಗಿರುವ ಮೌಲ್ಯವನ್ನಾಧರಿಸಿ ಸಾರಾಂಶ ಬರೆಯಿರಿ.** **1x4=4**

40. **ರಾಜ್ಯದ ಸಾಮ್ರಾಜ್ಯದ ತೆನೆ ಒಕ್ಕಿ**
**ಮಂಡಲ – ಗಿಂಡಲಗಳ ಗಡಮುಕ್ಕಿ**
**ತೇಲಿಸಿ ಮುಳುಗಿಸಿ ಖಂಡ ಖಂಡಗಳ**
**ಸಾರ್ವಭೌಮರ ನೆತ್ತಿಯ ಕುಕ್ಕಿ**
**ಹಕ್ಕಿ ಹಾರುತಿದೆ ನೋಡಿದಿರಾ !**

**ಮೌಲ್ಯಧಾರಿತ ಸಾರಾಂಶ** : ಕಾಲ ನಿಂತ ನೀರಲ್ಲ ಅದು ಸದಾ ಹರಿಯುತ್ತಿರುವ ನದಿ ಇದ್ದಂತೆ. ಚಲನಶೀಲತೆ ಜೀವಂತಿಕೆಯ ಗುಣ. ನಿಸರ್ಗದ ಹೊಂದಾಣಿಕೆಯಂತೆ ಕಾಲ ಉರುಳುತ್ತದೆ. ಅದಕ್ಕೆ ತಡೆ ಎಂಬುದಿಲ್ಲ. ಎಂತಹ ಪ್ರಭಾವಶಾಲಿಯಾದರೂ ನಿಸರ್ಗದತ್ತವಾದ ಕಾಲಚಕ್ರದ ಎದುರಿನಲ್ಲಿ ತಲೆಬಾಗಲೇಬೇಕು. ಅದಕ್ಕೆ ಹೊಂದಿಕೊಳ್ಳಬೇಕು. ಆಯಾ ಕಾಲದಲ್ಲಿ ನಡೆದ ಪ್ರತಿಯೊಂದು ಘಟನೆಯೂ ಕಾಲ ಉರುಳಿದಂತೆ ಇತಿಹಾಸವಾಗುತ್ತ ಹೋಗುತ್ತದೆ. ಕವಿ ಬೇಂದ್ರೆ ಅವರು ಕಾಲದ ಗತಿಯನ್ನು ಹಾರುವ ಹಕ್ಕಿಯೊಂದಿಗೆ ಸಮೀಕರಿಸಿ ನೋಡುವ ಪ್ರಯತ್ನ ಮಾಡಿದ್ದಾರೆ. ಹಕ್ಕಿಯ ಹಾರುವಿಕೆ ಪ್ರಕೃತಿಯ ಸಹಜಕ್ರಿಯೆಯೊಂದಿಗೆ ಯುಗಗಳೇ ಉರುಳಿ ಹೊಸತನಕ್ಕೆ ತೆರೆದುಕೊಳ್ಳುವ ಸಂಕೇತವೂ ಆಗಿದೆ.

ಬೇಂದ್ರೆಯವರು ಈ ಪದ್ಯದಲ್ಲಿ ಕಾಲದ ಸಾರ್ವಭೌಮತ್ವವನ್ನು ವಿವರಿಸಿದ್ದಾರೆ. ರಾಜ್ಯ, ಸಾಮ್ರಾಜ್ಯಗಳನ್ನು ವೈಭವದಿಂದ ಮೆರೆಯುವಂತೆ ಮಾಡಿದ್ದು ಇದೇ ಕಾಲವೆಂಬ ಹಕ್ಕಿ. ಹಾಗೆಯೇ ಅವುಗಳ ನಡುವೆ ಯುದ್ಧಗಳನ್ನು ಮಾಡಿಸಿ ತೆನೆಯಲ್ಲಿನ ಕಾಳುಗಳನ್ನು ಬೇರ್ಪಡಿಸುವಂತೆ ಬೇರೆಬೇರೆ ಮಾಡಿದ್ದು ಇದೆ ಕಾಲ. ಹಾಗಾಗಿ ಕಾಲ ಸಾರ್ವಭೌಮತ್ವವನ್ನು ಹೊಂದಿದೆ. ರಾಜ–ಮಹಾರಾಜರ ಸಣ್ಣದೊಡ್ಡ, ಕೋಟೆ–ಕೊತ್ತಲಗಳನ್ನು ಗಬಕ್ಕನೆ ನಾಶಮಾಡಿದ್ದು ಕಾಲವೇ. ವಿಶ್ವದ ಎಲ್ಲಾ ಭಾಗಗಳನ್ನು ಒಂದು ಸಲ ವೈಭವದಿಂದ ಮೆರೆಯುವಂತೆ ಮಾಡಿದ್ದು ಮತ್ತೊಂದು ಸಲ ಮಳುಗುವಂತೆ ಮಾಡಿದೆ. ಹಾಗೆಯೇ ಸಾರ್ವಭೌಮರೆಂದು ಮೆರೆದವರ ನೆತ್ತಿಯ ಮೇಲೆ ಕುಕ್ಕಿ ಕೆಳಗೆ ಬೀಳಿಸಿ ಹೊಸಕಿ ಹಾಕಿ ಹಕ್ಕಿ ಹಾರಿಹೋಗಿದೆ ಎಂದು ಹೇಳುತ್ತಾರೆ. ನಾನು ಎಂಬ ಅಹಂ ಒಳ್ಳೆಯದಲ್ಲ ಅದನ್ನು ಹೊಂದಿರುವವರು ಯಾರೇ ಆಗಲಿ ಕಾಲ ಎಂಬ ಹಕ್ಕಿ ಅವರನ್ನು ಒಂದಲ್ಲ ಒಂದು ದಿನ ಮಣ್ಣು ಮುಕ್ಕಿಸಿ ಸರ್ವನಾಶ ಮಾಡುತ್ತದೆ ಎಂಬುದನ್ನು ತಿಳಿಯಬಹುದು.

**XII. ಕೆಳಗಿನ ಪ್ರಶ್ನೆಗಳಿಗೆ ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರ ಬರೆಯಿರಿ.** **2x4=8**

41. **ಮುದುಕಿಯು ತನ್ನ ಮಗನು ಯುದ್ಧಕ್ಕೆ ಹೋದ ಸಂದರ್ಭವನ್ನು ಹೇಗೆ ವಿವರಿಸಿದಳು?**

**ಉತ್ತರ:** ರಾಹಿಲನು ಮುದುಕಿಗೆ ನಿಮ್ಮ ಮಗ ಈಗ ಎಲ್ಲಿದ್ದಾನೆಂದು ಕೇಳಿದಾಗ, ಮುದುಕಿಯು "ನನ್ನ ಮಗ ಯುದ್ಧಕ್ಕೆ ಹೋಗಿದ್ದಾನೆ ! ನನ್ನ ಮಗ ಇನ್ನೂ ಚಿಕ್ಕ ಹುಡುಗನಾಗಿದ್ದಾಗ ಅವನ ತಂದೆಯನ್ನು ಯುದ್ಧಕ್ಕೆ ಕರೆದುಕೊಂಡು ಹೋಗಿದ್ದರು. ಆದರೆ ಹಿಂತಿರುಗಲಿಲ್ಲ. ಎದೆ ತುಂಬ ಬೂದಿ ಮುಚ್ಚಿದ ಕೆಂಡ, ಎದೆಯ ಗಾಯ ಇಂದಿಗೂ ಇದೆ, ನೋಡು. ಎಲ್ಲ ದುಃಖ ನುಂಗಿಕೊಂಡು ಮಗನನ್ನು ಸಾಕಿ ಸಲಹಿದೆ. ಮದುವೆಯನ್ನೂ ಮಾಡಿದೆ. ಈಗ ಐದಾರು ವರ್ಷಗಳ ಬಳಿಕ ಸೊಸೆ ಗರ್ಭಿಣಿಯಾದಳು. ಮನೆಯಲ್ಲೊಂದು ಪುಟ್ಟ ಮಗುವಿನ ಅಳು ಕೇಳಲು ನನ್ನ ಮಗನು ತುದಿಗಾಲಲ್ಲಿ ನಿಂತು ಕಾಯುತ್ತಿದ್ದನು. ಅಷ್ಟರಲ್ಲಿ ಬಂತು ಯುದ್ಧ ! ಅವನೊಮ್ಮೆ ಹಿಂತಿರುಗಿ ಬಂದಿದ್ದರೆ ಸಾಕಾಗಿತ್ತು. ಈ ವಿಷಯ ತಿಳಿದು ಅವನೆಷ್ಟು ಸಂಕಟ ಪಡುತ್ತಾನೋ..." ಎಂದು ಮಗನು ಯುದ್ಧಕ್ಕೆ ಹೋದ ಸಂದರ್ಭವನ್ನು ವಿವರಿಸಿದಳು.

**ಅಥವಾ**

**ರಾಹಿಲನು ಮುದುಕಿಯ ಕುಟುಂಬಕ್ಕೂ, ಮುದುಕಿಯು ರಾಹಿಲನಿಗೂ ಮಾಡಿದ ಸಹಾಯವನ್ನು ಸಂಕ್ಷಿಪ್ತವಾಗಿ ವಿವರಿಸಿ.**

**ಉತ್ತರ:** ಯುದ್ಧದಲ್ಲಿ ಗಾಯಗೊಂಡ ರಾಹಿಲನು ಮುದುಕಿಯ ಮನೆಗೆ ಬರುತ್ತಾನೆ. ಆ ಸಂದರ್ಭದಲ್ಲಿ ಮುದುಕಿಯ ಸೊಸೆ ಹೆರಿಗೆ ಬೇನೆ ತಿನ್ನುತ್ತಿದ್ದಳು. ಇದನ್ನು ತಿಳಿದ ರಾಹಿಲ "ಅಮ್ಮ ನಾನೋರ್ವ ಡಾಕ್ಟರ್ ಆಕೆಯನ್ನು ಪರೀಕ್ಷಿಸಲೇ" ಎಂದು ಕೇಳಿದಾಗ ಮುದುಕಿಗೆ ಸಂತೋಷವಾಯಿತು. ನಂತರ ಮುದುಕಿ ರಾಹಿಲನ ಒದ್ದೆ ಬಟ್ಟೆಗಳನ್ನು ನೋಡಿ ತನ್ನ ಮಗನ ಬಟ್ಟೆಗಳನ್ನು ತಂದುಕೊಟ್ಟಳು. ರಾಹಿಲ ಒದ್ದೆಯಾಗಿದ್ದ ಬಟ್ಟೆ ಬದಲಿಸಿಕೊಂಡು ಮುದುಕಿಯ ಸೊಸೆಯನ್ನು ಪರೀಕ್ಷೆಮಾಡ ತೊಡಗಿದನು. ಬಹಳ ಹೊತ್ತಿನ ಪ್ರಯತ್ನದ ಬಳಿಕ ಮಗುವನ್ನು ಹೊರ ತೆಗೆದು ಸೊಸೆಯ ಜೀವ ಉಳಿಸಿದನು. ಆದರೆ ಮಗು ನಿರ್ಜೀವವಾಗಿತ್ತು. ನಂತರ ಮುದುಕಿಯು ಒಂದೆರಡು ಪುಟ್ಟ ಹಲಗೆ ತುಂಡುಗಳನ್ನು ಕೊಟ್ಟಳು. ಅವುಗಳಿಂದ ನೋವಾಗಿದ್ದ ಕಾಲುಗಳ ಆರೈಕೆ ಮಾಡಿಕೊಂಡನು. ಇದೇ ಸಮಯಕ್ಕೆ ಶತ್ರದೇಶದ ಸೈನಿಕರು ರಾಹಿಲನನ್ನು ಹುಡುಕಿಕೊಂಡು ಬಂದರು. ಆಗ ಮುದುಕಿಯು ರಾಹಿಲನ ಅಸಹಾಯಕತೆಯ ದಯನೀಯವಾದ ನೋಟವನ್ನು ನೋಡಿ ಯುದ್ಧಕ್ಕೆ ಹೋದ ತನ್ನ ಮಗನಂತೆ ಭಾವಿಸಿಕೊಂಡು ಸೊಸೆ ಮಲಗಿದ ಕೋಣೆಯ ಮಂಚದಡಿ ಕಳುಹಿಸಿ ಅವರಿಂದ ರಕ್ಷಿಸಿದಳು. ಶತ್ರುಸೈನಿಕರು ಹೋದ ಮೇಲೆ ರಾಹಿಲನು ರಾತ್ರಿ ಒಂದು ಕೋಣೆಯಲ್ಲಿ ಮಲಗುವಂತೆ ಏರ್ಪಾಟು ಮಾಡಿದಳು. ಒಂದೆರಡು ದಿನಗಳಲ್ಲಿ ಪರಸ್ಪರರಲ್ಲಿ ವಿಶ್ವಾಸ ಮೂಡಿತು. ಇಬ್ಬರೂ ಪರಸ್ಪರ ಸುಖ–ದುಃಖಗಳನ್ನು ಹಂಚಿಕೊಂಡರು. ಹೀಗೆ ರಾಹಿಲನು ಮುದುಕಿಯ ಕುಟುಂಬಕ್ಕೂ, ಮುದುಕಿಯು ರಾಹಿಲನಿಗೂ ಪರಸ್ಪರ ಸಹಾಯವನ್ನು ಮಾಡಿದರು.

42. **ಹಲಗಲಿ ದಂಗೆಗೆ ಕಾರಣವೇನು? ಸರಕಾರ ಅದನ್ನು ಹೇಗೆ ನಿಯಂತ್ರಿಸಿತು ?**

**ಉತ್ತರ:** ಕ್ರಿ.ಶ. 1857ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ನಂತರ ಕುಂಪಣಿ ಸರಕಾರ ನಿಶ್ಶಸ್ತ್ರೀಕರಣ ಕಾಯ್ದೆಯಡಿ ಎಲ್ಲ ಜನರಿಗೆ ಜೋರ ಮಾಡಿ ಕಸಿದು ಕೊಳ್ಳಿರಿ ಹತಾರ ಎಂಬ ಆದೇಶ ಹೊರಡಿಸಿತು. ಈ ಆದೇಶದ ಪ್ರಕಾರ ಕುಂಪಣಿ ಸರ್ಕಾರದ ಅಧಿಕಾರಿಗಳು ಹಲಗಲಿಗೆ ಬಂದು ಜೋರ ಮಾಡಿ ಬೇಡರ ಆಯುಧಗಳನ್ನು ಕಸಿದುಕೊಳ್ಳಲು ಹೋದರು. ಇದನ್ನು ವಿರೋಧಿಸಿ ರಾಮ, ಬಾಲ, ಹನುಮ, ಜಡಗ ಮೊದಲಾದ ಹಲಗಲಿ ಬೇಡರು ತಮ್ಮಲ್ಲಿರುವ ಆಯುಧಗಳನ್ನು ಕೊಡಲೊಪ್ಪದೆ ದಂಗೆ ಎದ್ದು ಒಳಗಿನಿಂದ ಮುಂಗಾರಿನ ಸಿಡಿಲು ಸಿಡಿಯುವ ಹಾಗೆ ಗುಂಡು ಹೊಡೆದರು. ಇದರಿಂದ ಬ್ರಿಟೀಷ್ ಸೈನಿಕರು ದಂಗು ಹಿಡಿದು ದೂರ ಸರಿದು ನಿಂತರು. ಆಗ ಇನ್ನು ಹೆಚ್ಚಿನ ದಂಡು ಬರಲಿ ಎಂದು ಸಾಹೇಬ (ಜೆ.ಬಿ.ಸೆಟೆನ್ಕರ್) ಪತ್ರ ಬರೆದು ತನ್ನ ಮೇಲಿನ ಅಧಿಕಾರಿಗೆ ಕಳಿಸಿದನು. ಆಗ ಬ್ರಿಟೀಷ್ ಸರ್ಕಾರದ ದಂಡು ತಯಾರಾಗಿ ಹಲಗಲಿಗೆ ಬಂದಿತು. ಬ್ರಿಟಿಷ್ ದಂಡಿನ ಸಿಪಾಯಿಗಳು ಹಲಗಲಿಯ ಬೇಡರನ್ನು ಬೆನ್ನು ಬೆನ್ನು ಹತ್ತಿ ತಿರುತಿರವಿ ಹಾಕಿ ಕೊಂದರು. ಬೇಡರನ್ನು ದಂಡಿನ ಮಧ್ಯೆ ಹಾಕಿಕೊಂಡು ಕರುಣೆ ಇಲ್ಲದೆ ಹಾಗೆ ಗುಂಡು ಹೊಡೆದು ಸಾಯಿಸಿದರು. ಸಿಡಿಲು ಸಿಡಿಯುವ ಹಾಗೆ ಸಿಟ್ಟಿಲೆ ಭರಪೂರವಾಗಿ ಗುಂಡನ್ನು ಸುರಿಸಿದರು. ಇದರಿಂದ ಹಲಗಲಿ ಬಂಟರು ಹೋರಾಡಿ ವೀರ ಮರಣವನ್ನಪ್ಪಿದರು. ಸಿಕ್ಕದ್ದನ್ನೆಲ್ಲ ತೆಗೆದುಕೊಂಡು ಊರಿಗೆ ಕೊಳ್ಳಿ ಇಟ್ಟು ಗುರುತು ಉಳಿಯದಂತೆ ಸುಟ್ಟು ಬೂದಿ ಮಾಡಿ ಹಲಗಲಿಯ ದಂಗೆಯನ್ನು ನಿಯಂತ್ರಿಸಿದರು.

**ಅಥವಾ**

**ಹಲಗಲಿ ದಂಗೆಯ ಪರಿಣಾಮವೇನು ?**

**ಉತ್ತರ:** ಕುಂಪಣಿ ಸರ್ಕಾರ ಹೊರಡಿಸಿದ್ದ ನಿಶ್ಶಸ್ತ್ರೀಕರಣದ ಆದೇಶವನ್ನು ವಿರೋಧಿಸಿ ತಮ್ಮಲ್ಲಿರುವ ಆಯುಧಗಳನ್ನು ಕೊಡಲು ಒಪ್ಪದೆ ದಂಗೆ ಎದ್ದ ಹಲಗಲಿಯ ಬೇಡರನ್ನು ಬಗ್ಗುಬಡಿಯಲು ಬ್ರಿಟೀಷ್ ಸರ್ಕಾರದ ದಂಡು ತಯಾರಾಗಿ ಹಲಗಲಿಗೆ ಬಂದಿತು. ಬ್ರಿಟಿಷ್ ದಂಡಿನ ಸಿಪಾಯಿಗಳು ಹಲಗಲಿಯ ಬೇಡರನ್ನು ಬೆನ್ನು ಬೆನ್ನು ಹತ್ತಿ ತಿರುತಿರವಿ ಹಾಕಿ ಕೊಂದರು. ಬೇಡರನ್ನು ದಂಡಿನ ಮಧ್ಯೆ ಹಾಕಿಕೊಂಡು ಕರುಣೆ ಇಲ್ಲದೆ ಹಾಗೆ ಗುಂಡು ಹೊಡೆದು ಸಾಯಿಸಿದರು. ಕೆಲವು ಬೇಡರು ತಪ್ಪಿಸಿಕೊಂಡು ಗುಡ್ಡದ ಕಡೆ ಓಡಿದರು. ಅಗಸಿಗೆ ಬಂದು ಬುದ್ಧಿ ಮಾತನ್ನು ಹೇಳುತ್ತಿದ್ದ ಹೆಬಲಕ ಸಾಹೇಬನ್ನು ಜಡಗ ಗುಂಡು ಹೊಡೆದು ಕೊಂದು ಹಾಕಿದನು. ಇದರಿಂದ ಸಿಟ್ಟಿಗೆದ್ದ ಕಾರಸಾಹೇಬ

ಊರನ್ನು ಲೂಟಿ ಮಾಡಲು ಆದೇಶಿಸಿದನು. ಬ್ರಿಟೀಷ್ ಸೈನಿಕರು ಸಿಡಿಲು ಸಿಡಿಯುವ ಹಾಗೆ ಸಿಟ್ಟಿಲೆ ಭರಪೂರವಾಗಿ ಗುಂಡನ್ನು ಸುರಿಸಿದರು. ಬಾಲನು ಕಸರತ್ತಿನಿಂದ ಹತ್ತಿಪ್ಪತ್ತು ಕುದುರೆಗಳನ್ನು ಕಡಿದು ಹಾಕಿದನು. ರಾಮನ ವಿಪರೀತ ಕಡಿತದಿಂದ ರಕ್ತದ ಕಾಲುವೆ ಹರಿಯಿತು. ಹೀಗೆ' ಹಲಗಲಿ ಬಂಟರಾದ ಪೂಜೇರಿ ಹನುಮಾ, ಬ್ಯಾಡರ ಬಾಲ, ಜಡಗ, ರಾಮ, ಭೀಮ ಮೊದಲಾದ ಹೋರಾಡಿ ವೀರ ಮರಣವನ್ನಪ್ಪಿದರು. ಹಲಗಲಿಗೆ ಮುತ್ತಿಗೆ ಹಾಕಿ ಬೇಡರನ್ನು ಬಗ್ಗು ಬಡಿದ ಬ್ರಿಟೀಷ್ ದಂಡು ಕೊಡಲಿ, ಕುಡಗೋಲು, ಕುಡ, ಕಬ್ಬಿಣ, ಮೊಸರು, ಬೆಣ್ಣಿ, ಹಾಲು, ಉಪ್ಪು, ಎಣ್ಣೆ, ಅರಿಸಿಣ, ಜೀರಗಿ, ಅಕ್ಕಿ, ಸಕ್ಕರೆ, ಬೆಲ್ಲ, ಗಂಗಳ, ತಂಬಿಗೆ, ಮಂಗಳಸೂತ್ರ, ಬೀಸುವಕಲ್ಲು – ಹೀಗೆ ಸಿಕ್ಕಿದ್ದೆಲ್ಲಾ ತೆಗೆದುಕೊಂಡು, ಊರಿಗೆ ಕೊಳ್ಳಿ ಇಟ್ಟು ಸುಟ್ಟು ಬೂದಿ ಮಾಡಿ ಗುರುತು ಉಳಿಯದಂತೆ ಮಾಡಿ ಹೋಗಿದ್ದರಿಂದ ಹಾಳಾಗಿ ಹೋಯಿತು.

**XIII. ಕೆಳಗಿನ ಗದ್ಯಭಾಗವನ್ನು ಮನಸ್ಸಿನಲ್ಲಿ ಓದಿಕೊಂಡು, ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರ ಬರೆಯಿರಿ. 4=(2+2)**

ಮನುಷ್ಯನಿಗೆ ತನ್ನ ಜೀವನದಲ್ಲಿ ಒಂದು ಗುರಿ ಇರಬೇಕು. ಮೊಗ್ಗಿನಂತೆ ಇರುವ ಗುರಿಯು ಆತನ ಶ್ರಮ, ಶ್ರದ್ಧೆಗಳಿಂದ ಹೂವಾಗಿ ಅರಳಿ ಫಲವನ್ನು ಪಡೆದು ಬಾಳಿನ ಅಂತ್ಯ ಕಾಣಬೇಕು. ತಾವರೆ ಕೆಸರಿನಲ್ಲಿ ಹುಟ್ಟಿದರೂ ಆಕಾಶದಲ್ಲಿ ಇರುವ ಸೂರ್ಯನ ಕಿರಣಗಳನ್ನು ನೋಡಿ ತಾನು ಅರಳಿ ಸುಂದರವಾಗಿ ಕಾಣಿಸುತ್ತದೆ. ಈ ರೀತಿಯ ಧ್ಯೇಯವನ್ನು ಇಟ್ಟುಕೊಂಡು ದುಡಿಮೆಗೆ ಶರಣಾಗುತ್ತ ಬದ್ಧತೆಯಿಂದ ಕೆಲಸ ಮಾಡಬೇಕು ಆಗ ಜೀವನದಲ್ಲಿ ಸಾರ್ಥಕತೆ ಸಿಗುತ್ತದೆ.

ಒಂದು ಬಾಣಕ್ಕೆ ಒಂದೆ ಗುರಿ ಅನೇಕ ಗುರಿಗಳು ಇರಲು ಸಾಧ್ಯವಿಲ್ಲ. ಒಂದು ದೇಹದಲ್ಲಿ ಒಂದೇ ಆತ್ಮ ಇರುತ್ತದೆ. ಹಾಗಾಗಿ ಒಂದು ಜೀವನದಲ್ಲಿ ಹಲವು ಗುರಿಗಳು ಏಕೆ? ಒಂದೇ ದೊಡ್ಡ ಗುರಿಯನ್ನು ಇಟ್ಟುಕೊಂಡು ಹಗಲುರಾತ್ರಿ ಗುರಿ ಸಾಧನೆಗೆ ಹೋರಾಡು. 'ಜನತಾ ಜನಾರ್ಧನ' ಎಂಬಂತೆ ಮನುಷ್ಯನಲ್ಲಿ ನಾರಾಯಣನನ್ನು ಕಾಣಬೇಕು. ಈ ಭೂಲೋಕದಲ್ಲಿ ಸ್ವರ್ಗದ ಸೌಂದರ್ಯ, ಸಂಪತ್ತನ್ನು ಕಂಡುಕೊಳ್ಳುತ್ತಾ, ಸ್ವಾರ್ಥಕ್ಕಾಗಿ ಬದುಕದೆ, ಪರರ ಸುಖಕ್ಕಾಗಿ, ಪರರಿಗೆ ಉಪಕಾರ ಮಾಡುತ್ತ, ಬದುಕುವುದೆ, ಪರರ ಸುಖಕ್ಕಾಗಿ ಪರರಿಗೆ ಉಪಕಾರ ಮಾಡುತ್ತ, ಬದುಕುವುದೆ ನಿಜವಾದ ಜೀವನ. ಅದನ್ನು ಬಿಟ್ಟು ಸ್ವಾರ್ಥದಿಂದ ಸಂಕುಚಿತ ಮನೋಭಾವವನ್ನು ಹೊಂದಿದರೆ ಅದು ನಮಗೆ ಅಪಕೀರ್ತಿಯನ್ನು ಉಂಟು ಮಾಡುತ್ತದೆ.

**ಪ್ರಶ್ನೆಗಳು :**

43.**ಅ) ಮನುಷ್ಯನ ಜೀವನದಲ್ಲಿ ಸಾರ್ಥಕತೆ ಯಾವಾಗ ಸಿಗುತ್ತದೆ ?**

**ಉತ್ತರ :** ಮನುಷ್ಯನಿಗೆ ತನ್ನ ಜೀವನದಲ್ಲಿ ಒಂದು ಗುರಿ ಇರಬೇಕು. ಮೊಗ್ಗಿನಂತೆ ಇರುವ ಗುರಿಯು ಆತನ ಶ್ರಮ, ಶ್ರದ್ಧೆಗಳಿಂದ ಹೂವಾಗಿ ಅರಳಿ ಫಲವನ್ನು ಪಡೆದು ಬಾಳಿನ ಅಂತ್ಯ ಕಾಣಬೇಕು. ತಾವರೆ ಕೆಸರಿನಲ್ಲಿ ಹುಟ್ಟಿದರೂ ಆಕಾಶದಲ್ಲಿ ಇರುವ ಸೂರ್ಯನ ಕಿರಣಗಳನ್ನು ನೋಡಿ ತಾನು ಅರಳಿ ಸುಂದರವಾಗಿ ಕಾಣಿಸುತ್ತದೆ. ಈ ರೀತಿಯ ಧ್ಯೇಯವನ್ನು ಇಟ್ಟುಕೊಂಡು ದುಡಿಮೆಗೆ ಶರಣಾಗುತ್ತ ಬದ್ಧತೆಯಿಂದ ಕೆಲಸ ಮಾಡಬೇಕು ಆಗ ಜೀವನದಲ್ಲಿ ಸಾರ್ಥಕತೆ ಸಿಗುತ್ತದೆ.

**ಆ) ಈ ಲೇಖನದ ಪ್ರಕಾರ ನಿಜವಾದ ಜೀವನ ಎಂದರೆ ಯಾವುದು ?**

**ಉತ್ತರ :** 'ಜನತಾ ಜನಾರ್ಧನ' ಎಂಬಂತೆ ಮನುಷ್ಯನಲ್ಲಿ ನಾರಾಯಣನನ್ನು ಕಾಣಬೇಕು. ಈ ಭೂಲೋಕದಲ್ಲಿ ಸ್ವರ್ಗದ ಸೌಂದರ್ಯ, ಸಂಪತ್ತನ್ನು ಕಂಡುಕೊಳ್ಳುತ್ತಾ, ಸ್ವಾರ್ಥಕ್ಕಾಗಿ ಬದುಕದೆ, ಪರರ ಸುಖಕ್ಕಾಗಿ, ಪರರಿಗೆ ಉಪಕಾರ ಮಾಡುತ್ತ, ಬದುಕುವುದೆ, ಪರರ ಸುಖಕ್ಕಾಗಿ ಪರರಿಗೆ ಉಪಕಾರ ಮಾಡುತ್ತ, ಬದುಕುವುದೆ ನಿಜವಾದ ಜೀವನ.

**XIV. ಈ ಕೆಳಗಿನ ಯಾವುದಾದರೂ ಒಂದಕ್ಕೆ ಕೊಟ್ಟಿರುವ ಮಾಹಿತಿಯನ್ನು ಆಧರಿಸಿ ಪತ್ರ ಬರೆಯಿರಿ. 1x5=5**

**44. ನಿಮ್ಮನ್ನು ಬಳ್ಳಾರಿಯ ಶ್ರೀದುರ್ಗಾಂಭಿಕ ಪ್ರೌಢಶಾಲೆ ಯಲ್ಲಿ ಓದುತ್ತಿರುವ ಸುಮಂತ ಎಂದು ಭಾವಿಸಿ ಕೊಂಡು ನಿಮ್ಮಶಾಲೆಯಲ್ಲಿ ನಡೆಯುವ ಶಾಲಾ ವಾರ್ಷಿಕ್ಕೋತ್ಸವಕ್ಕೆ ಬರುವಂತೆ ಆಹ್ವಾನಿಸಿ ಮೈಸೂರಿನಲ್ಲಿರುವ ನಿಮ್ಮ ತಂದೆಗೊಂದು ಪತ್ರ ಬರೆಯಿರಿ.**

ಸುಮಂತ
10ನೇ ತರಗತಿ
ಶ್ರೀದುರ್ಗಾಂಭಿಕ ಪ್ರೌಢಶಾಲೆ
ರಾಯಲ್ ವೃತ್ತ ಬಳ್ಳಾರಿ
ದಿನಾಂಕ: 15–02–2020

ಪೂಜ್ಯ ತೀರ್ಥರೂಪುರವರಿಗೆ ನಿಮ್ಮ ಮಗ/ಳು ಸುಮಂತ ಮಾಡುವ ಶಿರಸಾಷ್ಟಾಂಗ ಪ್ರಣಾಮಗಳು.

ನಾನು ಇಲ್ಲಿ ಆರೋಗ್ಯವಾಗಿದ್ದೇನೆ. ಅಲ್ಲಿ ನೀವೆಲ್ಲರೂ ಕ್ಷೇಮವಾಗಿದ್ದೀರಿ ಎಂದು ಭಾವಿಸಿರುತ್ತೇನೆ. ನನ್ನ ವಿದ್ಯಾಭ್ಯಾಸವು ಉತ್ತಮವಾಗಿ ನಡೆಯುತ್ತಿದೆ. ತಾಯಿಯವರಿಗೆ ನಮಸ್ಕಾರಗಳು. ದಿನಾಂಕ 30–02–2020 ರಂದು ನಮ್ಮ ಶಾಲೆಯಲ್ಲಿ ಶಾಲಾ ವಾರ್ಷಿಕ್ಕೋತ್ಸವವನ್ನು ಅದ್ದೂರಿಯಿಂದ ಮಾಡಲು ಸಿದ್ದತೆ ಮಾಡುತ್ತಿದ್ದಾರೆ. ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿದ್ದು ನಾನೂ ಕೂಡ ಭಾಗವಹಿಸುತ್ತಿದ್ದೇನೆ. ಆದ್ದರಿಂದ ತಾಯಿಯವರೊಂದಿಗೆ ನೀವು ತಪ್ಪದೆ ಬರಬೇಕೆಂದು ಕೇಳಿಕೊಳ್ಳುತ್ತಿದ್ದೇನೆ.

ಪ್ರಣಾಮಗಳೊಂದಿಗೆ

ಇಂತಿ ನಿಮ್ಮ ಪ್ರೀತಿಯ ಮಗ/ಳು
ಸುಮಂತ

**ಅಂಚೆ ವಿಳಾಸ**
ಶ್ರೀ ರವಿಭೂಷಣ. ಎಸ್
ಕುವೆಂಪು ನಗರ 3ನೇ ಮುಖ್ಯರಸ್ತೆ
ಮನೆ ನಂ–625
ಮೈಸೂರು ಅಂಚೆಪೆಟ್ಟಿಗೆ ಸಂಖ್ಯೆ–563421

**ಅಥವಾ**

**ನಿಮ್ಮನ್ನು ಉಡುಪಿ ಶ್ರೀಕೃಷ್ಣಪ್ರೌಢಶಾಲೆಯಲ್ಲಿ ಓದು ತ್ತಿರುವ ಕಿರಣ ಎಂದು ಭಾವಿಸಿಕೊಂಡು ನಿಮ್ಮ ಶಾಲೆಯಲ್ಲಿ ನಡೆದ ಗಣರಾಜ್ಯೋತ್ಸವ ಕಾರ್ಯಕ್ರಮದ ಕುರಿತು ಪತ್ರಿಕೆಯಲ್ಲಿ ಪ್ರಕಟಿಸುವಂತೆ ಪ್ರಜಾವಾಣಿ ಪತ್ರಿಕೆಯ ಸಂಪಾದಕರಿಗೊಂದು ಪತ್ರ ಬರೆಯಿರಿ.**

**ಇವರಿಂದ,**
ಕಿರಣ
10ನೇತರಗತಿ
ಶ್ರೀಕೃಷ್ಣಪ್ರೌಢಶಾಲೆ, ಉಡುಪಿ

**ಇವರಿಗೆ,**
ಸಂಪಾದಕರು, ಪ್ರಜಾವಾಣಿ ದಿನಪತ್ರಿಕೆ
ಕಲ್ಲುಕಟ್ಟಡ ರೂಮ್ ನಂ–5
ಸದಾಶಿವ ನಗರ, ಬೆಂಗಳೂರು–658432

ಮಾನ್ಯರೇ,

**ವಿಷಯ: ಗಣರಾಜ್ಯೋತ್ಸವದ ವರದಿ ಪ್ರಕಟಿಸುವಂತೆ ಮನವಿ**

ನಮ್ಮಶಾಲೆಯಲ್ಲಿ ದಿನಾಂಕ 26–04–2020 ರಂದು ಗಣರಾಜ್ಯೋತ್ಸವವನ್ನು ಅದ್ದೂರಿಯಾಗಿ ಆಚರಿಸಲಾಯಿತು ಅದರ ವರದಿಯನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಬೇಕೆಂದು ಮನವಿ ಮಾಡಿಕೊಳ್ಳುತ್ತಿದ್ದೇನೆ.

ದಿನಾಂಕ 26–04–2020 ರಂದು ಉಡುಪಿಯ ಶ್ರೀಕೃಷ್ಣಪ್ರೌಢಶಾಲೆಯಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಗಣರಾಜ್ಯೋತ್ಸವವನ್ನು ಅದ್ದೂರಿಯಾಗಿ ಆಚರಿಸಲಾಯಿತು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀಯುತ ಎ.ಪಿ.ಜೆ.ಅಬ್ದುಲ್‌ಕಲಾಂರವರು ಧ್ವಜಾರೋಹಣ ನೆರವೇರಿಸಿ ಸಂವಿಧಾನದ ಆದರ್ಶಗಳನ್ನು ಎಲ್ಲರ ಮನಮುಟ್ಟುವಂತೆ ವಿವರಿಸಿದರು. ಇನ್ನೊಬ್ಬ ಅತಿಥಿಗಳಾಗಿದ್ದ ಶ್ರೀಯುತ ಡಿ.ವಿ.ಜಿ ಯವರು ಸಂವಿಧಾನನ ಮಹತ್ವಗಳನ್ನು ಕುರಿತು ಭಾಷಣ ಮಾಡಿದರು. ಜಿಲ್ಲಾಧಿಕಾರಿಗಳು ತಮ್ಮ ಅಧ್ಯಕ್ಷಿಯ ಭಾಷಣದಲ್ಲಿ ಸಂವಿಧಾನದ ನಿರ್ಮಾತೃಗಳ ಕುರಿತು ಮತ್ತು ಭಾರತ ಗಣರಾಜ್ಯವಾದ ಬಗ್ಗೆ ತಿಳಿಸಿದರು. ಕನ್ನಡ ಶಿಕ್ಷಕರು ದೇಶಭಕ್ತಿಯ ಸ್ಲೋಗನ್ನುಗಳೊಂದಿಗೆ ಸ್ವಾಗತ ಮಾಡಿ ಎಲ್ಲರ ಗಮನ ಸೆಳೆದರು. ಸಮಾಜ ಶಿಕ್ಷಕರು ನಿರೂಪಿಸಿದರು. ವಿದ್ಯಾರ್ಥಿಗಳು ದೇಶಭಕ್ತಿ ಮೂಡಿಸುವ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಮಾಡಿದರು. ಮುಖ್ಯಗುರುಗಳು ಸಮಾರಂಭದಲ್ಲಿ ಭಾಗವಹಿಸಿದ್ದ ಎಲ್ಲರಿಗೂ ವಂದನಾರ್ಪಣೆ ಅರ್ಪಿಸಿದರು.

ಧನ್ಯವಾದಗಳೊಂದಿಗೆ

ದಿನಾಂಕ : 26–04–2020 ತಮ್ಮ ವಿಶ್ವಾಸಿ

ಸ್ಥಳ : ಉಡುಪಿ ಕಿರಣ

**XV. ಕೆಳಗಿನ ಯಾವುದಾದರೂ ಒಂದು ವಿಷಯದಲ್ಲಿ ಹದಿನೈದು ವಾಕ್ಯಗಳಿಗೆ ಕಡಿಮೆಯಿಲ್ಲದಂತೆ ಪ್ರಬಂಧ ಬರೆಯಿರಿ. 1x5=5**

45. **ಭಾವೈಕ್ಯತೆಯನ್ನು ಮೂಡಿಸು ವಲ್ಲಿ ರಾಷ್ಟ್ರೀಯ ಹಬ್ಬಗಳ ಪಾತ್ರ**

**ಪೀಠಿಕೆ :** ಒಂದು ದೇಶದ ಐಕ್ಯತೆಯನ್ನು ಕಾಪಾಡುವ ನಿಟ್ಟಿನಲ್ಲಿ ರಾಷ್ಟ್ರೀಯ ಹಬ್ಬಗಳು ಬಹಳ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತವೆ. ಭಾರತದಂತಹ ವೈವಿಧ್ಯತೆಯುಳ್ಳ ರಾಷ್ಟ್ರಗಳಲ್ಲಿ ಏಕತೆಯನ್ನು ತರುವುದು ಇಂತಹ ರಾಷ್ಟ್ರೀಯ ಹಬ್ಬಗಳ ಮೂಲಕ ಸಾಧ್ಯವಿದೆ. ಇಡಿ ರಾಷ್ಟ್ರದ ಜನರೆಲ್ಲರೂ ಯಾವುದೇ ಭೇಧಭಾವವಿಲ್ಲದೆ, ಜಾತಿ, ಧರ್ಮ, ಪ್ರಾದೇಶಿಕ ಭಿನ್ನತೆಯನ್ನು ತೊರೆದು ಒಟ್ಟಾಗಿ ಆಚರಿಸುವ ಹಬ್ಬಗಳೇ ರಾಷ್ಟ್ರೀಯ ಹಬ್ಬಗಳು ಎಂದು ಕರೆಯಬಹುದು. ನಮ್ಮದೇಶದಲ್ಲಿ ಮೂರು ರಾಷ್ಟ್ರೀಯ ಹಬ್ಬಗಳೆಂದು ಘೋಸಿಸಲಾಗಿದೆ.ಅವುಗಳೆಂದರೆ 1)ಸ್ವಾತಂತ್ರ್ಯ ದಿನಾಚರಣೆ 2) ಗಣರಾಜ್ಯೋತ್ಸವ 3) ಗಾಂಧಿ ಜಯಂತಿ.

**ವಿಷಯ ವಿವರಣೆ : 1) ಸ್ವಾತಂತ್ರ್ಯ ದಿನಾಚರಣೆ:** ಭಾರತ ಸುಮಾರು ಎರಡು ನೂರು ವರ್ಷಗಳ ಕಾಲ ಬ್ರಿಟೀಷರ ಆಳ್ವಿಕೆಗೆ ಒಳಪಟ್ಟಿತ್ತು.ವ್ಯಾಪಾರದ ಉದ್ದೇಶದಿಂದ ಬಂದ ಬ್ರಿಟೀಷರು ಭಾರತೀಯ ಅರಸರುಗಳು ದೌರ್ಬಲ್ಯಗಳನ್ನು ಉಪಯೋಗಿಸಿಕೊಂಡು ಭಾರತ ದೇಶದ ಆಡಳಿತ ಚುಕ್ಕಾಣಿ ಹಿಡಿದಿದ್ದರು.ಭಾರತಿಯರಿಗೆ ಸ್ವಾತಂತ್ರ ಎನ್ನವುದೇ ಇರಲಿಲ್ಲ. ಹಾಗಾಗಿ ಭಾರತೀಯರೆಲ್ಲರೂ ಒಟ್ಟಾಗಿ ಬ್ರಿಟೀಷರ ವಿರುದ್ಧ ಸ್ವಾತಂತ್ರ್ಯ ಹೋರಾಟದ ರಣಕಹಳೆಯನ್ನು ಊದಿ ಕೊನೆಗೆ 1947 ನೇ ಆಗಷ್ಟ್ 15 ರಂದು ಸ್ವಾತಂತ್ರವನ್ನು ಪಡೆದರು. ಆ ದಿನವನ್ನು ಪ್ರತಿವರ್ಷ ಭಾರತೀಯರೆಲ್ಲರೂ ಒಟ್ಟಾಗಿ ರಾಷ್ಟ್ರೀಯ ಹಬ್ಬವನ್ನಾಗಿ ಆಚರಿಸಿ ರಾಷ್ಟ್ರೀಯ ಐಕ್ಯತೆಯನ್ನು ಮೆರೆಯುತ್ತಾರೆ.ಅಂದು ಶಾಲಾ–ಕಾಲೇಜು–ಕಛೇರಿಗಳಲ್ಲಿ ರಾಷ್ಟ್ರೀಯ ಧ್ವಜವನ್ನು ಹಾರಿಸಿ ದೇಶಭಕ್ತಿ ಸಾರುವ ಕಾರ್ಯಕ್ರಮಗಳನ್ನು ಆಚರಿಸಿ ಒಗ್ಗಟ್ಟನ್ನು ಪ್ರದರ್ಶಿಸುತ್ತಾರೆ.

**2) ಗಣರಾಜ್ಯೋತ್ಸವ :**

ಭಾರತದೇಶವು ಸ್ವಾತಂತ್ರ್ಯವನ್ನು ಪಡೆದ ನಂತರ ಆಡಳಿತದ ರೂಪುರೇಷಗಳನ್ನು ಸಿದ್ಧಪಡಿಸಲಾಗುತ್ತದೆ. ಆ ರೂಪುರೇಷಗಳನ್ನು ಒಳಗೊಂಡಿರುವುದೇ ನಮ್ಮ ಸಂವಿಧಾನ. ಎಲ್ಲ ರಾಜ್ಯಗಳನ್ನು ಗಣಗಳನ್ನಾಗಿ ಮಾಡಿ (ಒಟ್ಟುಗೂಡಿಸಿ) ಉತ್ತಮವಾದ ಆಡಳಿತ ನಡೆಸಲು ಕಾನೂನುರೂಪ ಪಡೆದ ಸಂವಿಧಾನವನ್ನು ಜಾರಿಗೆ ತಂದ ದಿನವೇ ಗಣರಾಜ್ಯ ದಿನ. ಇದನ್ನು ಕೂಡ ನಮ್ಮ ದೇಶದ ಪ್ರಜೆಗಳೆಲ್ಲರೂ ಒಟ್ಟಾಗಿ ಸೇರಿ ಆಚರಿಸುತ್ತಾರೆ.ಈ

ದಿನದಲ್ಲಿ ರಾಷ್ಟ್ರಧ್ವಜವನ್ನು ಆರಿಸಿ ಸಂವಿಧಾನದ ನಿರ್ಮಾತೃಗಳು ಹಾಗೂ ತತ್ವಗಳನ್ನು ಸ್ಮರಿಸಿಕೊಳ್ಳುತ್ತಾರೆ. ಪ್ರತಿಯೊಬ್ಬರು ಸಂವಿಧಾನ ಪಾಲಿಸುವ ಮನೋಧರ್ಮವನ್ನು ಬೆಳೆಸಿಕೊಳ್ಳುವ ಆಶಯನ್ನು ಪಡೆಯುತ್ತಾರೆ. ಹಾಗೆಯೇ ದೇಶಭಕ್ತಿ ಸಾರುವ ಕಾರ್ಯಕ್ರಮಗಳನ್ನು ಆಚರಿಸಿ ಒಗ್ಗಟ್ಟನ್ನು ಪ್ರದರ್ಶಿಸುತ್ತಾರೆ.

**3) ಗಾಂಧಿ ಜಯಂತಿ :**

ಯಾವುದೇ ಒಂದು ದೇಶದ ಜನರೆಲ್ಲರೂ ಒಟ್ಟಾಗಿ ಸೇರಲು ನಾಯಕತ್ವ ಬೇಕು. "ನಾಯಕರಿಲ್ಲದ ನಾವೆ ದಡಸೇರಲಾರದು" ಅಂತೆಯೇ ನಮ್ಮ ದೇಶದ ಸ್ವಾತಂತ್ರ್ಯ ಪಡೆಯಲು ಬಹುಮುಖ್ಯ ನಾಯಕತ್ವವಹಿಕೊಂಡವರು ನಮ್ಮ ದೇಶದ ರಾಷ್ಟ್ರಪಿತ ಎನಿಸಿಕೊಂಡ ಮಹಾತ್ಮ ಗಾಂಧೀಜಿಯವರು. ಅವರ ಹುಟ್ಟಿದ ದಿನವೇ ಅಕ್ಟೋಬರ್ 2. ಆ ದಿನವನ್ನು ಗಾಂಧಿಜಯಂತಿಯೆಂದು ರಾಷ್ಟ್ರೀಯ ಹಬ್ಬವನ್ನಾಗಿ ಆಚರಿಸಲಾಗುತ್ತದೆ.ಏಕೆಂದರೆ ಗಾಂಧೀಜಿವರು ಸ್ವಾತಂತ್ರ್ಯ ಚಳುವಳಿಯ ಮುಂದಾಳತ್ವವನ್ನು ವಹಿಸಿಕೊಂಡು ಸ್ವಾತಂತ್ರ್ಯವನ್ನು ತಂದುಕೊಡುವಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡರು. ಆದ್ದರಿಂದ ಅವರ ಆದರ್ಶಗಳನ್ನು ನೆನೆಯುತ್ತ,ಅವರನ್ನು ಸ್ಮರಿಸುತ್ತಾ ಸ್ವಾತಂತ್ರ್ಯದ ಮಹತ್ವದಬಗ್ಗೆ ಕೊಂಡಾಡುವ ದಿನವಾಗಿದೆ.

**ಉಪಸಂಹಾರ :** ಭಾರತದಲ್ಲಿ ರಾಷ್ಟ್ರೀಯ ಹಬ್ಬಗಳನ್ನು ಆಚರಿಸುವುದರಿಂದ ಪ್ರತಿಯೊಬ್ಬ ನಾಗರಿಕರಲ್ಲಿ ಏಕತೆ. ದೇಶಭಕ್ತಿ, ಸಂವಿಧಾನದ ಮಹತ್ವ, ನಾಯಕತ್ವದ ಮಹತ್ವ ಮುಂತಾದ ವಿಚಾರಗಳನ್ನು ತಿಳಿಯಲು ಮತ್ತು ನಾವು ಅದೇ ರೀತಿ ನಡೆದುಕೊಳ್ಳಲು ನೆರವಾಗುತ್ತದೆ ಎಂಬ ಆಶಯವನ್ನು ಇಟ್ಟುಕೊಳ್ಳೋಣ.

**ಅಥವಾ**

**ನೆರೆಹಾವಳಿ ತಡೆಗಟ್ಟುವಲ್ಲಿ ಸರ್ಕಾರಗಳ ಪಾತ್ರ**

**ಪೀಠಿಕೆ :** ಸಹಜ ವಾಡಿಕೆಗಿಂತ ಅತಿ ಹೆಚ್ಚಾಗಿ ಮಳೆ ಬಂದಾಗ ಕೆರೆಕಟ್ಟೆಗಳು, ನದಿಗಳು, ಆಣೆಕಟ್ಟುಗಳು ತುಂಬಿ ಹೆಚ್ಚಾದ ನೀರು ಹರಿದು ಹೋಗುವಾಗ ತುಂಬಾ ಪ್ರವಾಹ ಉಂಟಾಗಿ ಭೂಪ್ರದೇಶಕ್ಕೆ ಹಾನಿವುಂಟು ಮಾಡುವುದರ ಜೊತೆಗೆ ಜನ ಜೀವನಕ್ಕೆ ತೊಂದರೆಯುಂಟಾಗುವ ಅತಿವೃಷ್ಟಿಯ ಸ್ಥಿತಿಯನ್ನು ನೆರೆಹಾವಳಿ ಎಂದು ಕರೆಯಬಹುದು. ನೆರೆಹಾವಳಿಯಾದಾಗ ಜನಜೀವನ ಅಸ್ತವ್ಯಸ್ತವಾಗುತ್ತದೆ. ಇಂತಹ ಸಂದರ್ಭದಲ್ಲಿ ನಮ್ಮ ಸರ್ಕಾರಗಳು ಜನರ ನೆರವಿಗೆ ಬಂದು ಪುನಃ ಬದುಕನ್ನು ಕಟ್ಟಿಕೊಳ್ಳಲು ಯೋಜನೆಗಳನ್ನು ರೂಪಿಸುವುದು ಅತಿಮುಖ್ಯವಾದ ಜವಬ್ದಾರಿಯಾಗಿದೆ.

**ವಿಷಯ ನಿರೂಪಣೆ :** ಪ್ರಕೃತಿ ವಿಕೋಪದಿಂದ ನೆರೆಹಾವಳಿ ಉಂಟಾಗಿ ಜನಜೀವನ ಅಸಹಜ ಸ್ಥಿತಿಯನ್ನು ತಲುಪಿದಾಗ ಸ್ಥಾಪಿತ ಸರ್ಕಾರಗಳು ಜನರು ಮತ್ತೆ ಸಹಜಸ್ಥಿತಿಗೆ ಮರಳುವಂತೆ ಕ್ರಮಗಳನ್ನು ಕೈಗೊಳ್ಳುವುದು ಬಹಳ ಮುಖ್ಯವಾಗಿದೆ. ನೆರೆಹಾವಳಿಯಲ್ಲಿ ಸಿಲುಕಿಕೊಂಡಿರುವ ಜನ– ಜಾನುವಾರುಗಳ ರಕ್ಷಣೆಗೆ ಅಗತ್ಯವಾಗ ಕ್ರಮಗಳನ್ನು ಕೈಗೊಳ್ಳುವುದು. ಮತ್ತು ಸುರಕ್ಷಿತ ಸ್ಥಳಕ್ಕೆ ರವಾನಿಸುವುದು ಬಹಳ ಮುಖ್ಯವಾದ ಕಾರ್ಯವಾಗಿದೆ. ನೆರೆಹಾವಳಿ ಉಂಟಾದ ಸ್ಥಳಗಳಲ್ಲಿ ಬೆಳೆಗಳು ನಾಶವಾಗಿ ಜನರಿಗೆ ಆಹಾರದ ತೊಂದರೆಯಾಗುವುದು. ಅಂತಹ ಸಂದರ್ಭದಲ್ಲಿ ಅಗತ್ಯವಾದ ಆಹಾರ ಸಾಮಾಗ್ರಿಗಳನ್ನು ಒದಗಿಸುವುಸುದರ ಜೊತೆಗೆ – ಗಂಜಿಕೇಂದ್ರಗಳನ್ನು ತೆರೆದು ಆಹಾರ ಮತ್ತು ಶುದ್ಧವಾದ ಕುಡಿಯವ ನೀರಿನ ವ್ಯವಸ್ಥೆಯನ್ನು ಮಾಡಬೇಕು. ಜಾನುವಾರುಗಳಿಗೆ ಗೋಶಾಲೆಗಳನ್ನು ತೆರೆಯುವುದರ ಮೂಲಕ ಮೇವಿನ ವ್ಯವಸ್ಥೆ, ನೀರಿನ ವ್ಯವಸ್ಥೆ ಮಾಡುವುದು.

ನೆರೆಪೀಡಿತ ಪ್ರದೇಶಗಳಲ್ಲಿ ಸಾಂಕ್ರಾಮಿಕ ರೋಗಗಳು ಹರಡದಂತೆ ತಡೆಗಟ್ಟುವುದ ಜೊತೆಗೆ ಅಗತ್ಯವಾದ ಔಷಧೋಪಚಾರಗಳನ್ನು ಮಾಡಬೇಕು. ಸ್ವಚ್ಚತೆಗೆ, ಆರೋಗ್ಯ ಸುರಕ್ಷತೆಗೆ ಕ್ರಮಗಳನ್ನು ಕೈಗೊಳ್ಳಬೇಕು. ರಸ್ತೆ , ಚರಂಡಿಗಳು, ವಿದ್ಯುತ್ , ದೂರವಾಣಿ , ಕಟ್ಟಡಗಳು, ಮನೆ ಕಳೆದುಕೊಂಡ ಸಂತ್ರಸ್ಥರಿಗೆ ಮನೆಗಳನ್ನು ಮರುನಿರ್ಮಾಣ ಮಾಡಿಕೊಡುವುದು ಸರ್ಕಾರದ ಕಾರ್ಯಯೋಜನೆಯಾಗಬೇಕು.

**ಉಪಸಂಹಾರ :** ಒಟ್ಟಿನಲ್ಲಿ ನೆರೆಹಾವಳಿಯುಂಟಾದಾಗ ಜನರಿಗೆ ಧೈರ್ಯವನ್ನು ತುಂಬುವುದರ ಜೊತೆಗೆ ಅವರು ಪುನಃ ತಮ್ಮ ಬದುಕನ್ನು ರೂಪಿಸಿಕೊಳ್ಳಲು ಸರ್ಕಾರಗಳು ಎಲ್ಲಾ ರೀತಿಯ ನೆರವನ್ನು ನೀಡುವುದರ ಮೂಲಕ ಯಶಸ್ವಿಯಾಗಿ ನೆರೆಹಾವಳಿಯಿಂದ ಉಂಟಾದ ಸಮಸ್ಯೆಗಳನ್ನು ಬಗೆಹರಿಸಬೇಕೆಂದು ಹೇಳಬಹುದು.